ಬಸವಣ್ಣನವರು

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ **ವಿಚಾರವೆಂಬ ಹೂವಾಯಿತ್ತು. ಆಚಾರವೆಂಬ ಕಾಯಾಯಿತ್ತು.** ನಿಷ್ಪತ್ತಿಯೆಂಬ ಹಣ್ಣಾಯಿತ್ತು. **ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ, ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ''**

ಎಂದು ಹೇಳಿ ವಿಚಾರ (ಜ್ಞಾನ) ಮತ್ತು ಆಚಾರ (ಕ್ರಿಯೆ) ಗಳಿಗೆ ಕಾರ್ಯ ಕಾರಣ ಭಾವವನ್ನು ಮಾರ್ಮಿಕವಾಗಿ ಹೇಳಿ ಇವೆರಡೂ ಸ್ವಾತ್ಮಾರ್ಪಣದಲ್ಲಿ ಸಹಾಯವಾಗಬೇಕಾದರೆ ''ನಿಷ್ಪತ್ತಿ, ಎಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ ಎಂದರೆ ಜ್ಞಾನ ಕರ್ಮಗಳ ಅಭಿಮಾನವಳಿದಾಗ ಮಾತ್ರವೇ ಸಾಧ್ಯ''ವೆಂದು ಮನೋಜ್ಞವಾಗಿ ಹೇಳಿದ್ದಾರೆ. ಮತ್ತು ಲೋಕಹಿತಕ್ಕಾಗಿ ಮಾಡುವ ಕರ್ಮಗಳು ಎಂದಿಗೂ ಪರಿತ್ಯಾಗಾರ್ಹವಲ್ಲ. ಆದುದರಿಂದಲೇ ಬಸವಾದಿ ಶಿವಶರಣರು 'ಕಾಯಕವೇ ಕೈಲಾಸ'ವೆಂದು ಕರ್ಮ (ಕಾಯಕ)ಕ್ಕೆ ಅಗ್ರಸ್ಥಾನವನ್ನಿತ್ತು ಸಮಾಜಸೇವಾಕರ್ಮಗಳಲ್ಲಿ ತೊಡಗಿ ಮಾದರಿಯಾಗಿದ್ದಾರೆ. ಅನುಭವಸೂತ್ರದಲ್ಲಿ ಈ ಸ್ಥಿತಿಯನ್ನೇ 'ದಾಸೋಹಂಭಾವ' ಎಂದು ಕರೆಯಲಾಗಿದೆ.

**'ಉಂಡೂ ಉಪವಾಸಿ, ಬಳಸಿಯೂ ಬ್ರಹ್ಮಚಾರಿ'** ಎಂಬ ನಾಣ್ಣುಡಿಯು ಈ ಧರ್ಮದ ಅನಾಸಕ್ತತೆಯನ್ನು ಸ್ಥಾಪಿಸಿ ವೇದಕಾಲದ ಜನಕ, ಯಾಜ್ಞವಲ್ಕ್ಯ ಮುಂತಾದ ಋಷಿಗಳು ಗೃಹಸ್ಥರಾಗಿದ್ದೂ ಬ್ರಹ್ಮನಿಷ್ಠರಾಗಿದ್ದ ಉತ್ಕೃಷ್ಟತೆಯನ್ನು ಜ್ಞಾಪಕಕ್ಕೆ ತರುತ್ತದೆ.

ಬಸವಣ್ಣನವರು

'' ಇಂದ್ರಿಯನಿಗ್ರಹವ ಮಾಡಿದರೆ, ಹೊಂದುವುವು ದೋಷಂಗಳು. ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು. ಸತಿಪತಿ ರತಿಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು? ಸತಿಪತಿ ರತಿಸುಖ ಭೋಗೋಪಭೋಗ ವಿಳಾಸವ ಬಿಟ್ಟರೆ ಸಿಂಧು ಬಲ್ಲಾಳರು? ನಿಮ್ಮ ಮುಟ್ಟಿ ಪರಧನ ಪರಸತಿಯರಿಗೆಳಸಿದರೆ ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವಾ''

(ಬ. ವ. ಪುಟ ೯೭)

ಎಂಬ ವಚನದಲ್ಲಿ ಶುದ್ಧವಾದ ದಾಂಪತ್ಯಪ್ರೇಮದ ಆದರ್ಶವನ್ನು ಪ್ರಸ್ತಾಪಿಸಿದ್ದಾರೆ.

ಸತಿಯ ಕಂಡು ವ್ರತಿಯಾದನಯ್ಯ ಬಸವಣ್ಣ, ವ್ರತಿಯಾಗಿ ಬ್ರಹ್ಮ ಚಾರಿಯಾದನಯ್ಯ ಬಸವಣ್ಣ, ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯ ಬಸವಣ್ಣ, ಗುಹೇಶ್ವರ ಲಿಂಗದಲ್ಲಿ ಬಾಲಬ್ರಹ್ಮಚಾರಿಯಾದವನು ಬಸವಣ್ಣನೊಬ್ಬನೇ

(ಪ್ರಭುದೇವರವಚನ)

ಆದುದರಿಂದ ವೀರಶೈವರಿಗೆ **'ನ ಪ್ರಜಯಾ'** ಎಂಬುದರಿಂದ ಮೋಕ್ಷಕ್ಕೆ ಗೃಹಸ್ಥನಾಗಿ ಪತ್ನೀ ಪುತ್ರಾದಿಗಳನ್ನು ತ್ಯಾಗಮಾಡಬೇಕೆಂಬುದು ಅನ್ವಯಿಸುವುದಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ.

ಕ್ಷಯಿಸದೆ ಸರ್ವಕಾಮಿತ ಸಮೃದ್ಧಿ ಸಮನ್ವಿತ ತತ್ತದೈಹಿಕಾ
ಶ್ರಯ ಘನಸೌಖ್ಯಮಂ ಬಿಡದೆ ಭೋಗಿಸಿ ತತ್ತ್ವನಿಜಸ್ವರೂಪ ನಿ ।
ಶ್ಚಯ ಪದಮಂ ಶರೀರದವಸಾನದೊಳೊಂದಿ ಮಹಾಮಹೇಶ್ವರ
ರ್ಬಯಸದೆ ಭೋಗಮೋಕ್ಷಪರರಪ್ಪುದು ಚಿತ್ರವಲಾ ಶಿವಾಧವ ॥

(ಶತಕತ್ರಯ ಪ. ೧೧)

ಎಂದು ಮೊಗ್ಗೆಯ ಮಾಯಿದೇವರು ವೀರಶೈವರ ಅನಾಸಕ್ತಿಯೋಗದ ಪರಮಾರ್ಥವನ್ನು ಹೃದಯಂಗಮವಾಗಿ ನಿರೂಪಿಸಿದ್ದಾರೆ.

**'ನ ಧನೇನ'** ಎಂಬ ಪದವು ಹೆಣ್ಣು ಮತ್ತು ಮಣ್ಣುಗಳಿಗೂ ಉಪಲಕ್ಷಣ. ಮೋಕ್ಷವನ್ನು ಹೊಂದುವುದಕ್ಕೆ ಕಾಮಿನೀ ಕಾಂಚನಗಳನ್ನು ಪರಿತ್ಯಾಗಮಾಡಬೇಕಾಗಿಲ್ಲ. ಏಕೆಂದರೆ ವೀರಶೈವ ಸಿದ್ಧಾಂತದಲ್ಲಿ ವಿಷಯಗಳು ಹೇಯವಲ್ಲ. ವಿಷಯಗಳಲ್ಲಿರುವ ಕುದೃಷ್ಟಿ ಎಂದರೆ ಕೆಟ್ಟ ಭಾವನೆಯೇ ಹೇಯ. ಮಾನವನು ವಿಷಯಗಳನ್ನು ವಿಷಯತ್ವರೂಪದಿಂದ ಸ್ವೀಕರಿಸಿದರೆ ಅದು ಹೇಯ. ಅವುಗಳನ್ನು ಪರಮಾತ್ಮನಿಗೆ ಅರ್ಪಿಸಿ ಪ್ರಸಾದವನ್ನಾಗಿ ಮಾಡಿ ಲಿಂಗಮುಖದಿಂದ ಸ್ವೀಕರಿಸಿದರೆ ಹೇಯವಾಗುವುದಿಲ್ಲ. ಶ್ರೀ ಕೃಷ್ಣನೂ ಸಹ **'ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ । ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್'** ಎಂದಿದ್ದಾನೆ. ಈಶಾವಾಸ್ಯೋಪನಿಷತ್ತಿನಲ್ಲಿಯೂ ಸಹ **'ತೇನ ತ್ಯಕ್ತೇನ ಭುಂಜೀಥಾಃ'** ಎಂಬಲ್ಲಿ ಪ್ರಸಾದದ ಮಹತ್ವವನ್ನೇ ಪ್ರಸ್ತಾಪಿಸಲಾಗಿದೆ. ಆದುದರಿಂದಲೇ ವೀರಶೈವ ಸಿದ್ಧಾಂತದಲ್ಲಿ ಪಂಚೇಂದ್ರಿಯಗಳಲ್ಲಿಯೂ ಅಂತಃಕರಣದಲ್ಲಿಯೂ ಗುರು ಲಿಂಗಾದಿ ಷಡ್ಲಿಂಗಗಳನ್ನು ಭಾವಿಸಿ, ಸರ್ವವಿಷಯಗಳನ್ನೂ ಆಯಾ

ಲಿಂಗಗಳ ಮೂಲಕ ಪ್ರಸಾದರೂಪವಾಗಿ ಸ್ವೀಕರಿಸಬೇಕೆಂಬುದನ್ನು ಮಾರ್ಮಿಕವಾಗಿ ನಿರೂಪಿಸಿದೆ.

> "ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ. ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ. ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ. ಇಂತೀ ತ್ರಿವಿಧಗುಣವನರಿವಾತನು ಅಚ್ಚಲಿಂಗೈಕ್ಯನು ಕೂಡಲ ಸಂಗಮ ದೇವಾ" (ಬ. ವ. ಪು. ೧೨೧)

ಎಂಬ ಬಸವಣ್ಣನವರ ವಚನವು ಇದೇ ಅಂಶವನ್ನು ಸ್ಪಷ್ಟಪಡಿಸುತ್ತದೆ. "**ಇಷ್ಟಲಿಂಗಾರ್ಪಿತಂ ಶುದ್ಧಂ**" ಎಂಬ ಅನುಭವಸೂತ್ರದಲ್ಲಿಯೂ ಶಿವಪ್ರಸಾದವನ್ನು ಸ್ವೀಕಾರ ಮಾಡುವಲ್ಲಿ ದೋಷವಾಗಲಾರದು, ಎಂದಿರುವುದರಿಂದ ವಿಷಯ "ಪರಿತ್ಯಾಗವು" ಶ್ರುತಿಸಮ್ಮತವಲ್ಲ. ಮತ್ತು ವಿಷಯ "**ಪರಿಗ್ರಹ**" ಅನಿವಾರ್ಯ. ಅಲ್ಲದೆ ತನು ಮನ ಧನಗಳನ್ನು ಗುರು, ಲಿಂಗ ಜಂಗಮರಿಗೆ ಕ್ರಮದಿಂದ ಅರ್ಪಿಸಬೇಕೆಂಬ ನಿಯಮವು ಅವುಗಳ ಆವಶ್ಯಕತೆಯನ್ನು ಸೂಚಿಸುತ್ತದೆ. ಶರೀರದಲ್ಲಿ ಹೇಯಬುದ್ಧಿಯನ್ನು ತಾಳಿ ಅನಾದರಣೆ ಮಾಡಿದ ಪಕ್ಷದಲ್ಲಿ ಗುರುವನ್ನು ತನುವಿನ ಸೇವೆಯಿಂದ ತೃಪ್ತಿಪಡಿಸಬೇಕೆಂಬ ತತ್ವಕ್ಕೆ ಧಕ್ಕೆ ಬರುತ್ತದೆ. ಆದುದರಿಂದಲೇ ಉಪನಿಷತ್ತು '**ನಾಯಮಾತ್ಮಾ ಬಲಹೀನೇನ ಲಭ್ಯಃ**' (ಮುಂಡಕ ೩–೨–೪) ಎಂದು ಎಚ್ಚರಿಸಿದೆ. ಮನಸ್ಸನ್ನು ಲಿಂಗದಲ್ಲಿ ಲೀನಗೊಳಿಸಿ ಸಮರಸಾನಂದವನ್ನು ಅನುಭವಿಸಬೇಕು. ಹಾಗೆಯೇ ಧನವನ್ನು ಜಂಗಮಕ್ಕೆ ಅರ್ಪಿಸಬೇಕೆಂಬುದರಿಂದ ಮಾನವನು ವ್ಯಾವಹಾರಿಕ ಸತ್ಕರ್ಮಗಳನ್ನು ಎಸಗಿ ಧನಾರ್ಜನೆ ಮಾಡಬೇಕೆಂಬುದನ್ನು ಹೇಳಿದೆ. ಹೀಗೆ ಜಂಗಮ ಸೇವೆಗಾಗಿ ಮಾಡಿದ ಉದ್ಯೋಗ (ಕರ್ಮ)ವು ಹೇಯವಲ್ಲ. ಹಾಗೂ ಅಂಥ ಧನವು ಶಿವಸ್ವರೂಪಿಯಾದ ಜಂಗಮನಿಗೆ ಅರ್ಪಿತವಾಗುವುದರಿಂದ ಅದು ಸ್ವಾರ್ಥಕ್ಕೆ ಉಪಯೋಗವಾಗದೆ ಮತ್ತೆ ಸಮಾಜದ ಮತ್ತು ರಾಷ್ಟ್ರದ ಅಭ್ಯುದಯಕ್ಕಾಗಿ ವಿನಿಯೋಗಿಸಲ್ಪಡುವುದರಿಂದ ಜನತೆಯಲ್ಲಿ ಸಮವಾಗಿ ಸಂಪದ್ವಿನಿಮಯವು ಏರ್ಪಟ್ಟು ಒಬ್ಬನು ಶ್ರೀಮಂತನು ಮತ್ತೊಬ್ಬನು ಬಡವನೆಂಬ ವ್ಯತ್ಯಾಸವು ಹೋಗಿ ಸಮಾನತೆಯು ನೆಲಸಿ, ನಾಡಿನಲ್ಲಿ ಶಾಂತಿಸ್ಥಾಪನೆಯಾಗುವುದೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಇದರಿಂದ ನಿಜಗುಣಾರಾಧ್ಯರು ಹೇಳುವ **ಲೌಕಿಕ ಪರಮಾರ್ಥ**ರೂಪವಾದ **ಅಭ್ಯುದಯ ನಿಶ್ಶ್ರೇಯಸ್ಸು**ಗಳೆರಡೂ ಏಕಕಾಲದಲ್ಲಿಯೇ ಶಿವಭಕ್ತನಿಗೆ ಸಾಧ್ಯವಾಗುತ್ತವೆ. ಆದುದರಿಂದ ಕೆಸರಿನಲ್ಲಿನ ಕುಂಬಾರ ಹುಳುವಿನಂತೆ ಅನಾಸಕ್ತನಾಗಿ ಕೇವಲ ಶಿವಾರಾಧನೆಗಾಗಿಯೇ ಸರ್ವವಿಧದಲ್ಲಿಯೂ ಪ್ರಯತ್ನಿಸುವವರೇ **ಶಿವಯೋಗಿ**ಗಳು. ಇದನ್ನು ಬಸವಣ್ಣನವರು,

> "ತನುವ ಕೊಟ್ಟು ಗುರುವನೊಲಿಸಲೇ ಬೇಕು. ಮನವ ಕೊಟ್ಟು ಲಿಂಗವ ನೊಲಿಸಲೇ ಬೇಕು. ಧನವ ಕೊಟ್ಟು ಜಂಗಮುವನೊಲಿಸಲೇ ಬೇಕು. ಈ ತ್ರಿವಿಧವ ಹೊರಗುಮಾಡಿ ಹರೆಯ ಹೊಯಿಸಿ ಕುರುಹ ಪೂಜಿಸುವವರ ಮೆಚ್ಚ ಕೂಡಲಸಂಗಮದೇವಾ" (ಬ. ವ. ಪು. ೨೧)

ಎಂದು ಹೇಳಿದ್ದಾರೆ. ಹೀಗೆ ಸಾಧಕನು ತನ್ನ ಹೃದಯಕಮಲದಲ್ಲಿರುವ ದಹರಾಕಾಶದಲ್ಲಿ ಬೆಳಗುವ 'ನೀಲತೋಯದಮಧ್ಯಸ್ಥ' ಮುಂತಾದ ಲಕ್ಷಣ ಲಕ್ಷಿತವಾದ ಚಿತ್ಕಲೆಯೇ ಭಕ್ತಾನುಗ್ರಹಾರ್ಥವಾಗಿ ಪ್ರಾಣಲಿಂಗ ರೂಪವಾಗಿ ಬೆಳಗುವುದೆಂದರಿದು ಆ ಪರಶಿವ ಬ್ರಹ್ಮದಲ್ಲಿ ಲಿಂಗಾಂಗಸಾಮರಸ್ಯರೂಪವಾದ ನಿರತಿಶಯಾನಂದವನ್ನು ಪಡೆಯುತ್ತಾನೆ. **'ಪರಾಂಚಿ ಖಾನಿ ವ್ಯತೃಣತ್'** ಎಂಬ ಕಾಠಕ ಶ್ರುತಿಯು ಇದನ್ನೇ ಉದ್ಗಾರ ಮಾಡಿದೆ. ॥ ೩ ॥

## ಮೂಲ

**ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸ ಯೋಗಾದ್ಯತಯಶ್ಶುದ್ಧಸತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥ ೪ ॥**

**ಅರ್ಥ :—** ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ = ವೇದಾಂತ = ಈಶಾದಿ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ, ವಿಜ್ಞಾನ=ವಿಶೇಷಜ್ಞಾನ ಅರ್ಥಾತ್ ಪಶು, ಪಾಶ, ಪತಿ ಇವುಗಳ ವಿಚಾರಾತ್ಮಕವಾದ ಸಮ್ಯಗ್ ಜ್ಞಾನದಿಂದ, ಸುನಿಶ್ಚಿತ=ಸಂಶಯ ವಿಕಲ್ಪಗಳಿಲ್ಲದೆ ದೃಢವಾಗಿ ನಿಶ್ಚೈಸಲ್ಪಟ್ಟ, ಅರ್ಥಾಃ=ಲಿಂಗಾಂಗಸಾಮರಸ್ಯರೂಪವಾದ ಪರಮಪುರುಷಾರ್ಥ

ಪ್ರದವಾದ ಮಹಾಪಾಶುಪತವ್ರತಶೀಲರಾದುದರಿಂದಲೇ, ಶುದ್ಧಸತ್ವಾಃ= ನಿರ್ಮಲ ಪರವಸ್ತುಸ್ವರೂಪರಾದ, ತೇ=ಪೂರ್ವಮಂತ್ರದಲ್ಲಿ ಉಕ್ತವಾದ ಲಕ್ಷಣಗಳಿಂದ ಕೂಡಿದ, ಯತಯಃ=ಷಟ್‌ಸ್ಥಲಾನುಸಂಧಾನರೂಪ ಪ್ರಯತ್ನಶೀಲರಾದ ಶಿವಯೋಗಿಗಳು, ಸಂನ್ಯಾಸಯೋಗಾತ್='ಸತಿ ಬ್ರಹ್ಮಣಿ ನ್ಯಾಸಃ ಮನೋ ನ್ಯಸ್ಯತೀತಿ ಸಂನ್ಯಾಸಃ, ಸ ಚಾಸೌ ಯೋಗಃ ಸಂನ್ಯಾಸಯೋಗಃ' ಎಂಬ ವ್ಯುತ್ಪತ್ತಿಯಿಂದ ಪರಶಿವ ಬ್ರಹ್ಮದಲ್ಲಿ ಫಲಾಸಕ್ತಿರಹಿತ ನಿಷ್ಕಾಮ ಶಿವಾರ್ಪಣಾನುಭವರೂಪವಾದ ಶಿವಯೋಗದಿಂದ, ಪರಾಂತಕಾಲೇ=ಶರೀರವಿಯೋಗಸಮಯದಲ್ಲಿ, ಬ್ರಹ್ಮಲೋಕೇತು=ಶಿವಲೋಕದಲ್ಲಿ, ಪರಾಮೃತಾತ್=ಮುಕ್ತಾವಸ್ಥೆಯಲ್ಲಿರುವಾಗ ಸೂಕ್ಷ್ಮಶರೀರ ಭಂಗವಾಗಿ, ಪರಿಮುಚ್ಯಂತಿ=ಸರ್ವವ್ಯಾಪಕ ಲಿಂಗಾಂಗ ಸಾಮರಸ್ಯರೂಪವಾದ ಶಿವಸಾಕ್ಷಾತ್ಕಾರವನ್ನು ಅನುಭವಿಸುತ್ತಾರೆ.

> "ಸ ಖಲ್ವೇವಂ ವರ್ತಯನ್ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ।
> ನ ಚ ಪುನರಾವರ್ತತೇ ನ ಚ ಪುನರಾವರ್ತತೇ"

ಎಂಬ ಛಾಂದೋಗ್ಯವಚನಾನುಸಾರವಾಗಿ ಶಿವೋಪಾಸಕರು ಇಹದಲ್ಲಿ ಜೀವನ್ಮುಕ್ತರಾದ್ದರಿಂದ ಶಿವನೊಡನೆ ಎಲ್ಲ ಇಷ್ಟಾರ್ಥಗಳೂ ದೊರೆತು ತರುವಾಯ ಭ್ರಮರಕೀಟ ನ್ಯಾಯದಂತೆ ಜೀವಭಾವನಿವೃತ್ತಿಯಾಗಿ ಶಿವತ್ವಪ್ರಾಪ್ತಿಯಾದ ಮೇಲೆ ಜನನ ಮರಣಾತ್ಮಕ ಘೋರ ಸಂಸಾರ ಚಕ್ರದಲ್ಲಿ ಸಿಕ್ಕದೆ ಶಿವಸಾಯುಜ್ಯಹೊಂದುವರೆಂಬುದು ಈ ಮಂತ್ರದ ಮುಖ್ಯ ಆಶಯವಾಗಿದೆ. ಇದಕ್ಕೆ ಅನುಗುಣವಾಗಿ **"ಬ್ರಹ್ಮವಿದಾಪ್ನೋತಿ ಪರಂ" "ಬ್ರಹ್ಮವಿದ್ ಬ್ರಹ್ಮೈವ ಭವತಿ" "ತರತಿ ಶೋಕಮಾತ್ಮವಿತ್" "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" "ತತ್ತ್ವಮಸಿ"** ಮುಂತಾದ ಶ್ರುತಿಗಳಲ್ಲಿಯೂ ಸಹ ಪರಶಿವಬ್ರಹ್ಮೋಪಾಸಕರಿಗೆ ಪರಶಿವತ್ವಪ್ರಾಪ್ತಿರೂಪವಾದ ಬ್ರಹ್ಮಸಾಕ್ಷಾತ್ಕಾರವನ್ನು ಹೇಳಿರುವುದಲ್ಲದೆ ಶ್ರೀಪತಿ ಭಗವತ್ಪಾದಾಚಾರ್ಯರೂ ಸಹ ಫಲಾಧ್ಯಾಯೋಕ್ತ **"ಅನಾವೃತ್ತಿಃ ಶಬ್ದಾದನಾವೃತ್ತಿಶ್ಶಬ್ದಾತ್"** ಎಂಬ ಕೊನೆಯ ಬ್ರಹ್ಮಸೂತ್ರಕ್ಕೆ ಇದೇ ಅಭಿಪ್ರಾಯವನ್ನು ವಿಸ್ತಾರವಾಗಿ ಹೇಳಿರುತ್ತಾರೆ. ಮಹಾನುಭಾವಿಗಳಾದ ಬಸವಣ್ಣನವರು,

"ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ
ಮಾಡುವ ನೀಡುವ ನಿಜಗುಣವುಳ್ಳೊಡೆ
ಇದೇ ಜನ್ಮ ಕಡೆ ಕೂಡಲಸಂಗಮದೇವ!"

ಎಂಬಲ್ಲಿ ಹೇಳಿರುವ **ನಿಜಗುಣವಾದರೂ** ಇದನ್ನೇ ಸೂಚಿಸುವುದಾಗಿದೆ. ಇನ್ನು **"ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ"** ಎಂಬುದರಿಂದ ಉಪನಿಷದ್ವಿದ್ಯೆಯಿಂದ ಬ್ರಹ್ಮತತ್ತ್ವವನ್ನು ಚೆನ್ನಾಗಿ ತಿಳಿದಿರುವವರೇ ಶುದ್ಧಸತ್ವರಾದ ಯತಿಗಳೆಂದು ಹೇಳಿರುವ ವಿಶೇಷಣವು ಮಹಾಪಾಶುಪತ ವ್ರತಶೀಲರಾದ ಶಿವಯೋಗಿಗಳಿಗೇ ಹೇಗೆ ಅನ್ವಯಿಸುವುದೆಂಬುದನ್ನು ವ್ಯಾಖ್ಯಾನಕಾರರು ಅನೇಕ ಪ್ರಮಾಣಗಳಿಂದ ಸಿದ್ಧಮಾಡಿರುತ್ತಾರೆ.

**'ಆತ್ಮದ್ರವ್ಯಂ ಸ್ವಯಂ ಶುದ್ಧಂ ಸತ್ಯಜ್ಞಾನಾದಿ ಲಕ್ಷಣಂ'** **'ಅಸ್ನಾವಿರಂ ಶುದ್ಧಮಪಾಪವಿದ್ಧಂ'** ಎಂಬ ಪ್ರಮಾಣಗಳಿಂದ **'ಶುದ್ಧಸತ್ವ'**ವೆಂದರೆ ಪರಿಶುದ್ಧವಾದ ಪರಮಾತ್ಮಸ್ವರೂಪವನ್ನು ಪಡೆಯುವಿಕೆ. ಈ ಸ್ಥಿತಿಯನ್ನು ಪಡೆದವರಿಗೆ **ಮಹಾಪಾಶುಪತವ್ರತಿ**ಗಳೆಂದು ಕರೆಯುತ್ತಾರೆ. ವೇದಾಂತಶಾಸ್ತ್ರದಲ್ಲಿ ಮುಖ್ಯವಾದ ಈ ಪಾಶುಪತ ವ್ರತವನ್ನು **ಅತ್ಯಾಶ್ರಮವ್ರತ**ವೆಂದು ಕರೆಯುತ್ತಾರೆ. **'ಅತ್ಯಾಶ್ರಮ ಸಮಾಖ್ಯಂ ಯತ್'** ಎಂಬ ಪ್ರಮಾಣದಿಂದ 'ಪಾಶುಪತವ್ರತವೇ ಸಮಸ್ತ ವೇದಾಂತಗಳಲ್ಲಿ ಸಾರವತ್ತಾದುದು. ಇದರಿಂದ ಶಿವಭಾವವನ್ನು ಪಡೆದು ಶಿವಯೋಗವನ್ನು ಆಚರಿಸಬೇಕು' ಎಂದು ಕ್ರಿಯಾಸಾರಕಾರರು ಸಿದ್ಧಾಂತಮಾಡಿದ್ದಾರೆ. ಅಲ್ಲದೆ ಇದೇ ಕೈವಲ್ಯ ಶ್ರುತಿಯೂ ಸಹ **'ಅತ್ಯಾಶ್ರಮಸ್ಥಃ'** ಎಂಬ ಮುಂದಿನ ಮಂತ್ರದಲ್ಲಿ 'ಅತ್ಯಾಶ್ರಮಸ್ಥ'ನೇ ಮೋಕ್ಷಾಧಿಕಾರಿಯೆಂದು ಹೇಳಿರುವುದರಿಂದ ಅತ್ಯಾಶ್ರಮಸ್ಥರಾದ ಮಹಾಪಾಶುಪತರಾರೆಂಬುದನ್ನು ಅರಿಯುವುದು ಅವಶ್ಯ.

"ಪಾಶುಪತವು ಪೂರ್ವ ಮತ್ತು ಅಪರ ಎಂದು ಎರಡು ವಿಧ. ಶೈವಾಗಮಾನುಸಾರವಾಗಿ ಭಸ್ಮರುದ್ರಾಕ್ಷಧಾರಣಗಳನ್ನು ಮಾಡಿಕೊಂಡು ಲಿಂಗರೂಪನಾದ (ಸ್ಥಾವರ) ಮಹಾದೇವನನ್ನು ತ್ರಿಕಾಲಗಳಲ್ಲಿ ಪೂಜಿಸುವುದೇ **ಪೂರ್ವಪಾಶುಪತ**ವೆನಿಸುವುದು. ನಿಗಮಾಗಮ ವಿಧಿಯಂತೆ

ಶೈವದೀಕ್ಷೆಯನ್ನು ಹೊಂದಿ ಶಿವಲಿಂಗವನ್ನು ಕರ, ಕಂಠ, ಅಥವಾ ವಕ್ಷ ಸ್ಥಳಗಳಲ್ಲಿ ಧರಿಸಿ ತ್ರಿಕಾಲಗಳಲ್ಲಿ ಹಸ್ತಪೀಠದಲ್ಲಿ ಅರ್ಚಿಸುವುದೇ **ಮಹಾ ಪಾಶುಪತ**ವೆನಿಸುವುದು: * ಈ ಮಹಾಪಾಶುಪತವ್ರತವನ್ನೇ ಆದಿತ್ಯ, ಲೈಂಗ್ಯ, ಸ್ಕಾಂದ, ಕೂರ್ಮ ಪುರಾಣಗಳಲ್ಲಿ ಹೇಳಲಾಗಿದೆ. ಅಲ್ಲದೆ ಕನ್ನಡ ಸುಪ್ರಸಿದ್ಧ ಕವಿಯಾದ ಲಕ್ಕಣ್ಣದಂಡೇಶ (ಕ್ರಿ. ಶ. ೧೪೨೮)ನು ತನ್ನ ಶಿವತತ್ತ್ವ ಚಿಂತಾಮಣಿಯಲ್ಲಿ ತನ್ನ ಗುರುವಾದ ಮಲ್ಲಿಕಾರ್ಜುನ ನನ್ನು ಮಹಾಪಾಶುಪತವ್ರತಿಯೆಂದು ಸ್ತುತಿಸಿದ್ದಾನೆ. † ಆದುದರಿಂದ ವೀರಶೈವರಿಗೆ (ಲಿಂಗಧಾರಿ) **ಮಹಾಪಾಶುಪತ**ರೆಂದು **ಅನೂಚಾನ**ವಾಗಿ ಕರೆಯುತ್ತಿರುವುದರಿಂದ ಅವರೇ ಶುದ್ಧ ಸತ್ವರಾದ ಯತಿಗಳು. ಇಂತಹ ಮಹಾ ಪಾಶುಪತವ್ರತ ನಿಷ್ಠನಾದ ಶಿವಭಕ್ತನನ್ನೇ ಉಪನಿಷತ್ತಿನಲ್ಲಿ **'ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನ್ ಬ್ರಹ್ಮವಿದಾಂ ವರಿಷ್ಠಃ'** ಎಂದು ಹೇಳಿದೆ. ಇಂಥ ಯತಿಗಳು ಫಲಾಪೇಕ್ಷೆಯಿಲ್ಲದೆ ಶಿವನಲ್ಲಿ ಮನಃ ಪ್ರಣಿಧಾನ ರೂಪವಾದ ಶಿವಯೋಗದಿಂದ ಶಿವಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ಭಗವದ್ಗೀತೆಯಲ್ಲಿಯೂ ಸಹ **'ಕರ್ಮಣ್ಯೇವಾಧಿ ಕಾರಸ್ತೇ'** ಎಂಬುದರಿಂದ ನಿಷ್ಕಾಮಯೋಗವು ಉಕ್ತವಾಗಿದೆ. ಧ್ಯಾನ ಮತ್ತು ಜ್ಞಾನಾತ್ಮಕ ಶಿವಯೋಗವನ್ನು **'ಮಹಾಮುಖ'**ವೆಂದು ನೀಲ ಕಂಠ ಶಿವಾಚಾರ್ಯರು ಕರೆಯುತ್ತಾರೆ.

---

* ದ್ವಿಧಾ ಪಾಶುಪತಂ ಜ್ಞೇಯಂ ಪೂರ್ವಾಪರವಿಭೇದತಃ ।
ಶೈವಾಗಮಾನುಸಾರೇಣ ಭಸ್ಮರುದ್ರಾಕ್ಷಧಾರಣಮ್ ॥
ಉಪಾಸ್ಥ್ವ ಶಿವಂ ಮಹಾದೇವಂ ಲಿಂಗರೂಪಮುಮಾಪತಿಮ್ ।
ಅರ್ಚಯೇತ್ತ್ರಿಕಾಲಂ ವೈ ಪೂರ್ವಪಾಶುಪತಂ ಹಿ ತತ್ ॥
ನಿಗಮಾಗಮಸಂಘಾನಶೈವದೀಕ್ಷಾವಿಧಾನತಃ ।
ಶಿವಲಿಂಗಂ ಕರೇ ಕಂಠೇ ಧೃತ್ವಾ ವಕ್ಷಸ್ಥಲೇಽಪಿ ವಾ ॥
ತ್ರಿಕಾಲಂ ಯೋಽರ್ಚಯೇತ್ ಭಕ್ತ್ಯಾ ಮಹಾಪಾಶುಪತೋ ಹಿ ಸಃ ।
(ಶ್ರೀಕರಭಾಷ್ಯ)

† ನಿರುಪಮಿತವೆನಿಪ ಮಹದಾಕಾಶಪದ್ಮದೊಳ್
ಸ್ಫುರಿಸುವ ಮಹಾ ಜ್ಞಾನ ಕರ್ಣಿಕಾಪೀಠದೊಳ್
ಪರಮ ತೇಜೋರಾಶಿಯಾದ ನಿರುಪಾಧಿಕ ಜ್ಯೋತಿಯಾಗಿಪ್ಪ ಶಿವಜನಾ ।
ಪರ ಕಳೇವರವೆ ಭಕ್ತಾನುಗ್ರಹಾರ್ಥಮವ
ತರಿಸಿ ಸದ್ಗುರುಮೂರ್ತಿ ಮಲ್ಲಿಕಾರ್ಜುನ ನಾಮ
ಧರನಾದ **ಪಾಶುಪತಸದ್ವ್ರತ**ದ ಗುಣಾಗ್ರಣಿಯ **ಚರಣಾಂಬುಜಕ್ಕೆ** ಶರಣು ॥

ಸ್ಥೂಲದೇಹವನ್ನು ಬಿಟ್ಟಮೇಲೆ ಆತ್ಮವು ಲಿಂಗ (ಸೂಕ್ಷ್ಮ) ಶರೀರ ದೊಡನೆ ಪ್ರಾಕೃತಮಂಡಲದವರೆಗೂ ಹೋಗಿ ಅಲ್ಲಿರುವ ವಿರಜಾನದಿ ಯಲ್ಲಿ ಸ್ನಾನಮಾಡಿದೊಡನೆಯೇ ಲಿಂಗಶರೀರ ಭಂಗವಾಗಿ ಆತ್ಮನಿಗೆ ಸ್ವಯಂ ಗಮನಶಕ್ತಿ ಬರುವುದೆಂದೂ, ಅಲ್ಲಿಂದ ಮುಂದೆ ಪರಿಶುದ್ಧ ಆತ್ಮವು ಅಪ್ರಾಕೃತ ಮಂಡಲದಲ್ಲಿ ಶಿವಸಾಯುಜ್ಯಪಡೆಯುವುದೆಂದೂ ಕೆಲವು ಶೈವ ಸಿದ್ಧಾಂತಗಳ ಮತವು. ಆದರೆ ವೀರಶೈವಾಚಾರ್ಯರು ಈ ವಿಷಯವನ್ನು ಬಹು ಕೂಲಂಕಷವಾಗಿ ವಿಚಾರಮಾಡಿ ಆತ್ಮನ ಪರಮಪದಪ್ರಾಪ್ತಿ ವಿಧಾನವನ್ನು ಪ್ರವಿಲಾಪನಮಾರ್ಗದಿಂದ ನಿರೂಪಿಸಿರು ತ್ತಾರೆ.

## ಪ್ರವಿಲಾಪನ ಮಾರ್ಗದ ಸಂಕ್ಷಿಪ್ತಸ್ವರೂಪ

ಪಾದದಿಂದ ಮೊಣಕಾಲಿನವರೆಗೆ ಪೃಥಿವೀಸ್ಥಾನ. ಅಲ್ಲಿಂದ ನಾಭಿಯ ವರೆಗೆ ಅಪ್ಪುವಿನಸ್ಥಾನ. ಅಲ್ಲಿಂದ ಹೃದಯದವರೆಗೆ ಅಗ್ನಿಸ್ಥಾನ. ಅಲ್ಲಿಂದ ಭ್ರೂಮಧ್ಯವವರೆಗೆ ವಾಯುವಿನ ಸ್ಥಾನ. ಅಲ್ಲಿಂದ ಬ್ರಹ್ಮರಂಧ್ರದ ವರೆಗೆ ಆಕಾಶದ ಸ್ಥಾನ. ಹೀಗೆ ಶಿವಭಕ್ತನು ತನ್ನ ಶರೀರದಲ್ಲಿ ಪಂಚ ಮಹಾಭೂತಗಳನ್ನೂ ಅವುಗಳ ಆಕಾರ, ಲಾಂಛನ, ವರ್ಣ ಮತ್ತು ಬೀಜಾಕ್ಷರಗಳೊಂದಿಗೆ ಪರಿಭಾವಿಸಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿ ಪಂಚಗುಣಾತ್ಮಕವಾದ ಪೃಥಿವಿಯನ್ನು ಅದರ ಬೀಜವೆನಿಸಿದ ಷಡುದ್ಘಾತ ಪ್ರಯೋಗದಿಂದ ಅಪ್ಪುವಿನಲ್ಲಿಯೂ, ಅಪ್ಪನ್ನು ಅಗ್ನಿಯಲ್ಲಿಯೂ, ಅಗ್ನಿ ಯನ್ನು ವಾಯುವಿನಲ್ಲಿಯೂ, ವಾಯುವನ್ನು ಆಕಾಶದಲ್ಲಿಯೂ ಆಯಾ ಉದ್ಘಾತ ಪ್ರಯೋಗದಿಂದ ಲಯಗೊಳಿಸಿ, ಆಕಾಶವನ್ನು ಅಹಂಕಾರ ದಲ್ಲಿಯೂ, ಅಹಂಕಾರವನ್ನು ಮಹತ್ತತ್ತ್ವದಲ್ಲಿಯೂ, ಮಹತ್ತತ್ತ್ವ ವನ್ನು ಪ್ರಕೃತಿಸ್ವರೂಪ ಮಾಯೆಯಲ್ಲಿಯೂ, ಅಂಥ ಮಾಯೆಯನ್ನು ನಿತ್ಯಶುದ್ಧಬುದ್ಧಮುಕ್ತಸ್ವರೂಪ ಸ್ವಾತ್ಮಪ್ರಕಾಶವೂ, ಸತ್ಯಜ್ಞಾನಾನಂದ ಲಕ್ಷಣವೂ, ಪರಮಕಾರಣವೂ ಆದ ಪರಬ್ರಹ್ಮದಲ್ಲಿ ಪ್ರವಿಲಾಪನಮಾಡಿ **'ಶುದ್ಧೋಽಹಂ ಮುಕ್ತೋಽಹಂ ಸಚ್ಚಿದಾನಂದಸ್ವರೂಪೋಽಹಂ'** ಎಂದು ಚಿರಕಾಲ ಭಾವಿಸುವುದೇ ಈ ಸಿದ್ಧಾಂತದ ವೈಶಿಷ್ಟ್ಯ.

ಹೀಗೆ ಸಾಧಕನು ಪ್ರತಿದಿನವೂ ತನ್ನ ಇಷ್ಟಲಿಂಗ ಪೂಜಾಸಮಯ ದಲ್ಲಿ ಅನುಸಂಧಾನಮಾಡಿ ಭಕ್ತಾದಿ ಆರು ಸ್ಥಲಗಳಲ್ಲಿ ಶಿವಾನುಭವಮಾಡುವ ಮಹಾಸಾಧನೆಯ ಪ್ರಭಾವದಿಂದ ಭಕ್ತನು ಭ್ರಮರವನ್ನೇ ನೆನೆನೆನೆದು ಭ್ರಮರವೇ ಆಗುವ ಕೀಟದಂತೆ ತನ್ನ ಜೀವಿತಕಾಲದಲ್ಲಿಯೂ ಸಹ ಸ್ಥೂಲಶರೀರಕ್ಕೂ ಅತೀತವಾದ ಸೂಕ್ಷ್ಮಶರೀರಾವಚ್ಛೇದೇನ ಜೀವ ನ್ಮುಕ್ತಾತ್ಮಕವಾದ ಸ್ಥಿತಿಯನ್ನು ಹೊಂದಿರುತ್ತಾನೆ. ಈ ಸ್ಥಿತಿಯನ್ನೇ ಬ್ರಹ್ಮಲೋಕ ಅಥವಾ ಶಿವಲೋಕ (ಮಹಾಕೈಲಾಸ)ವಾಸ ಸ್ಥಿತಿಯೆಂದು ಕರೆಯುತ್ತಾರೆ. ಇಂಥ ಸ್ಥಿತಿಯಲ್ಲಿ ಜೀವನು ನಿರ್ಲಿಪ್ತನಾಗಿ 'ಉಂಡೂ ಉಪವಾಸಿ ಬಳಸಿಯೂ ಬ್ರಹ್ಮಚಾರಿ' ಯಾಗಿರಲು ಸಾಧ್ಯ. ಆದರೆ ದೇಹಾವಸಾನಸಮಯದಲ್ಲಿ ಆತ್ಮನು ಆ ಸೂಕ್ಷ್ಮಶರೀರವನ್ನು ತ್ಯಜಿಸು ವುದರಿಂದ ಇದಕ್ಕೆ 'ಪರಾಂತಕಾಲ'ವೆಂದು ಈ ಶ್ರುತಿ ಹೇಳುತ್ತದೆ. ಆ ಸ್ಥಿತಿಯಲ್ಲಿ ಘಟದಲ್ಲಿ ಹಬ್ಬಿರುವ ದೀಪಪ್ರಕಾಶವು ಘಟವು ಒಡೆದಮೇಲೆ ಎಲ್ಲೆಡೆಯೂ ಹರಡುವಂತೆ ಶಿವಾನುಭವನಿಷ್ಠವಾದ ಆತ್ಮವು ಸೂಕ್ಷ್ಮ ಶರೀರವನ್ನೂ ತ್ಯಜಿಸಿ ಕಾರಣಾತ್ಮಕ ಶರೀರವನ್ನು ಪಡೆದು ಸರ್ವವ್ಯಾಪಕ ವಾದ ಭಾವಲಿಂಗದಲ್ಲಿ ನೀರಿನಲ್ಲಿ ನೀರು ಬೆರೆವಂತೆ ಐಕ್ಯವಾಗುತ್ತದೆ. ಅಥರ್ವಶಿರಸ್ಸಿನಲ್ಲಿ ಹೇಳುವ **'ಶಿವ ಏಕೋ ಧ್ಯೇಯಃ ಶಿವಂಕರಃ'** **'ಶಿವಂ ಕರೋತೀತಿ ಶಿವಂಕರಃ'** ಎಂಬ ವ್ಯುತ್ಪತ್ತಿಯಿಂದ ಭಕ್ತನನ್ನು ಮುಕ್ತನನ್ನಾಗಿಸುವುದೇ ಈ ಮಂತ್ರದ ಅಂತರಾರ್ಥ. ॥ ೪ ॥

# ಮಹೇಶಸ್ಥಳ

ನಿಷ್ಠೆಯು ಅಂದರೆ ಮನೋದಾರ್ಢ್ಯವು ಮತ್ತು ಗುರೂಕ್ತಮಾರ್ಗದಿಂದ ಆಚರಣೆಯು ಮಾಹೇಶ್ವರಸ್ಥಲದ ಮುಖ್ಯ ಲಕ್ಷಣವು ಈ ಮಂತ್ರಗಳಲ್ಲಿ ಪ್ರತಿಪಾದಿತವಾಗಿದೆ.

ಸಿದ್ಧಸಾಧ್ಯ ಸ್ವರೂಪಗಳನ್ನು ಅತಿಸಂಕ್ಷೇಪವಾಗಿ ವಿವರಿಸಿ ಸಾಧಕನಿಗೆ ಆದರ ಸಾಧನಕ್ರಮುವನ್ನು 'ವಿವಿಕ್ತದೇಶೇ ಚ' ಇತ್ಯಾದಿಗಳಿಂದ ಶ್ರುತಿಯು ಹೇಳುತ್ತದೆ.

## ಮೂಲ

**ವಿವಿಕ್ತದೇಶೇ ಚ ಸುಖಾಸನಸ್ಥಃ ಶುಚಿಸ್ಸಮಗ್ರೀವ ಶಿರಃಶರೀರಃ । ಅತ್ಯಾಶ್ರಮಸ್ಥಃ ಸಕಲೇಂದ್ರಿಯಾಣಿ ನಿರುಧ್ಯ ಭಕ್ತ್ಯಾ ಸ್ವಗುರುಂ ಪ್ರಣಮ್ಯ ॥ ೫ ॥**

**ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿಂತ್ಯ ಮಧ್ಯೇ ವಿಶದಂ ವಿಶೋಕಮ್ । ಅಚಿಂತ್ಯಮವ್ಯಕ್ತಮನಂತರೂಪಂ ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಮ್ ॥ ೬ ॥**

**ತಮಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಂ । ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಮ್ ॥೭॥**

**ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ ॥**

**ಅರ್ಥ :**—ಅತ್ಯಾಶ್ರಮಸ್ಥಃ=ಆಶ್ರಮಪದದಿಂದ ವರ್ಣಕ್ಕೂ ಉಪಲಕ್ಷಣವಾದುದರಿಂದ ಅತಿವರ್ಣಾಶ್ರಮ ವೈಶಿಷ್ಟ್ಯದಿಂದ ಕೂಡಿರುವ ಮಹಾಪಾಶುಪತ ವ್ರತನಿಷ್ಠನಾದ, (ಮುನಿಃ=ವೀರಶೈವ ಶಿವಭಕ್ತನಾದ

ಸಾಧಕನು) ವಿವಿಕ್ತದೇಶೇ=ಜನೋಪದ್ರವರಹಿತವಾದ ಪುಣ್ಯಾರಣ್ಯಾಶ್ರಮ ಮೊದಲಾದ ಪ್ರಶಾಂತಪ್ರದೇಶದಲ್ಲಿ, ಶುಚಿಃ=ಜಲಭಸ್ಮಾದಿ ಬಾಹ್ಯಸ್ನಾನ ದಿಂದಲೂ, ಶಾಂತಿಸತ್ಯಾದಿ ಆಭ್ಯಂತರ ಸ್ನಾನದಿಂದಲೂ, ಸಾತ್ವಿಕಾಹಾ ರಾದಿ ನಿಯಮಿತ ಆಹಾರ ವಿಹಾರಗಳಿಂದಲೂ, ಶುದ್ಧಾಂತಃಕರಣವುಳ್ಳವ ನಾಗಿ, ಸುಖಾಸನಸ್ಥಃ=ಸ್ವಸ್ತಿಕಾಸನಾದಿಗಳಲ್ಲಿ ಸಮಗ್ರೀವಶಿರಃಶರೀರಃ= ಯೋಗಶಾಸ್ತ್ರೋಕ್ತವಾದ ರೀತಿಯಲ್ಲಿ ನೇರವಾಗಿ ಕುಳಿತು, ಸಕಲೇಂದ್ರಿ ಯಾಣಿ = ಚಕ್ಷುರಾದಿ ಬಹಿರಿಂದ್ರಿಯಗಳನ್ನು ಮತ್ತು ಅಂತರಿಂದ್ರಿಯ (ಮನಸ್ಸು) ವನ್ನೂ ವಿಷಯಗಳಿಗೆರಗದಂತೆ, ನಿರುಧ್ಯ=ನಿಗ್ರಹಿಸಿ, ಧ್ಯೇಯವಸ್ತುವಿಗೂ ತನಗೂ ಅವಿಚ್ಛಿನ್ನಸ್ಮೃತಿಸಂತಾನ ರೂಪವಾದ ಏಕಾಗ್ರಮನಸ್ಸಿನಿಂದ ಕೂಡಿದ, ಭಕ್ತ್ಯಾ=ತನಗಿಂತಲೂ ಗುರುದೇವತಾದಿ ಗಳಲ್ಲಿ ಅಧಿಕತಾರೂಪವಾದ ಗೌರವಬುದ್ಧಿಯಿಂದ, ಸ್ವಗುರುಂ=ತನ್ನ ಗುರುವನ್ನು, ಪ್ರಣಮ್ಯ=ತತ್ಸ್ವರೂಪವನ್ನು ಮನಸ್ಸಿನಲ್ಲಿ ಚೆನ್ನಾಗಿ ನೆನೆದು. ॥ ೫ ॥

ಹೃತ್ಪುಂಡರೀಕಂ=ತನ್ನ ಹೃದಯಕಮಲವನ್ನು, ವಿರಜಂ=ದುರ್ವಿ ಷಯ ವಾಸನಾರಹಿತವಾದುದಾದ್ದರಿಂದಲೇ, ವಿಶುದ್ಧಂ=ಪರಿಶುದ್ಧವಾದು ದನ್ನಾಗಿ, ವಿಚಿಂತ್ಯ=ಭಾವಿಸಿ, ಮಧ್ಯೇ=ಆ ಹೃದಯಕಮಲ ಮಧ್ಯದಲ್ಲಿ, ವಿಶದಂ=ಶುದ್ಧಸ್ಫಟಿಕದಂತೆ ಶುಭ್ರವಾದುದಾದ್ದರಿಂದಲೇ, ವಿಶೋಕಂ= ಶೋಕಕ್ಕೆ ಕಾರಣವಾದ ಮಾಯಾಸಂಬಂಧವಿಲ್ಲದಿರುವುದರಿಂದ ದುಃಖ ರಹಿತವಾದ, ಅವ್ಯಕ್ತಂ=ಶಬ್ದ, ಸ್ಪರ್ಶ, ರೂಪ, ರಸಾದಿಗಳ ಅಭಿವ್ಯಕ್ತಿ ಕಾರಣಗಳಿಲ್ಲದಿರುವುದರಿಂದ ನಾಮರೂಪುಗಳಿಲ್ಲದ, ಅಚಿಂತ್ಯಂ=ನಿರ್ವಿ ಕಲ್ಪಕವಾಗಿರುವುದರಿಂದ ವಾಕ್ಕು ಮನಸ್ಸುಗಳಿಗೆ ಅತೀತವಾದ, ಅನಂತ ರೂಪಂ=ಊರ್ಧ್ವಲಿಂಗ, ಚಂದ್ರಧರತ್ವಾದಿ ಸಕಳನಾಕಾರ ಸಗುಣಾತ್ಮಕ ಭಕ್ತಾನುಗ್ರಹಾರ್ಥವಾಗಿ ಸ್ವೇಚ್ಛಾವಿಗ್ರಹ ರೂಪನಾದ, ಶಿವಂ=ಮಂಗಳ ಕರನಾದ, ಪ್ರಶಾಂತಂ=ಸಂಸಾರ ಸಂಪರ್ಕವಿಲ್ಲದಿರುವುದರಿಂದ ಅಲೆಗಳಡ ಗಿದ ಕಡಲಿನಂತೆ ಅತ್ಯಂತ ಶಾಂತನಾದ, ಅಮೃತಂ=ಜನನಮರಣರಹಿತ ವಾಗಿ ಅಮೃತತ್ವ(ಮೋಕ್ಷ)ಕ್ಕೆ ಕಾರಣವಾದ, ಬ್ರಹ್ಮಯೋನಿಂ= ಚತುರ್ಮುಖಾದಿಗಳ ಉತ್ಪತ್ತಿಗೂ ಕಾರಣನಾದ. ॥ ೬ ॥

ಆದಿಮಧ್ಯಾಂತವಿಹೀನಂ=ಮೊದಲು ಮಧ್ಯೆ ಕಡೆಗಳಿಲ್ಲದ, ಏಕಂ=ಇಷ್ಟಪ್ರಾಣಾದಿ ಸ್ವಗತಭೇದವಿಶಿಷ್ಟನಾದರೂ ಸಜಾತೀಯ ವಿಜಾತೀಯ ಭೇದಶೂನ್ಯವಾದುದರಿಂದ ಅದ್ವಿತೀಯನಾದ, ವಿಭುಂ=ಸರ್ವವ್ಯಾಪಕನಾದ, ಚಿದಾನಂದಂ=ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣವೆಂಬ ಪಂಚಲಕ್ಷಣ ಲಕ್ಷಿತನಾದ, ಅರೂಪಂ=ನಿಷ್ಕಲ, ನಿರಾಕಾರವುಳ್ಳ, ಅದ್ಭುತಂ=ಅಜಹರಿಗಳಿಗೂ ಆಶ್ಚರ್ಯಕರವಾದ ಉರುಲಿಂಗ, ವಿರಾಡ್ರೂಪಾದಿ ಅದ್ಭುತರೂಪವುಳ್ಳ, ಉಮಾಸಹಾಯಂ=ಇಚ್ಛಾಜ್ಞಾನಕ್ರಿಯಾಶಕ್ತಿ ವಿಶಿಷ್ಟನಾದ, ಪ್ರಭುಂ=ತೃಣದಿಂದ ಬ್ರಹ್ಮದವರೆಗಿನ ಸಕಲ ಚರಾಚರ ಪ್ರಪಂಚಕ್ಕೂ ಸ್ವಾಮಿಯಾದ, ತ್ರಿಲೋಚನಂ=ಸೂರ್ಯಚಂದ್ರಾಗ್ನಿರೂಪವಾದ ಅಥವಾ ಇಚ್ಛಾ, ಜ್ಞಾನ, ಕ್ರಿಯಾತ್ಮಕವಾದ ಮೂರು ಕಣ್ಣುಗಳುಳ್ಳ, ನೀಲಕಂಠಂ=ಲೋಕೋದ್ಧಾರಕ್ಕಾಗಿ ವಿಷಪಾನಮಾಡಿರುವುದರಿಂದ ಕಾರುಣ್ಯಸೂಚಕವಾದ ಕಪ್ಪುಗೊರಲಿನಿಂದ ಪ್ರಕಾಶಿಸುವ, ತಂ=ಹಿಂದೆಹೇಳಿದ ಮಹಾಮಹಿಮೆಗಳಿಂದ ಕೂಡಿದ, ಪರಮೇಶ್ವರಂ=ದೇವೋತ್ತಮನಾದ ಪರಶಿವನನ್ನು, ಧ್ಯಾತ್ವಾ=ಸ್ವಸ್ವರೂಪದಿಂದ ಅನುಚಿಂತಿಸಿ, ತಮಸಃ ಪರಸ್ತಾತ್=ಮಾಯೆಗಿಂತಲೂ ಅತೀತವಾದ ಅಂದರೆ ಪ್ರಕೃತಿ ವಿಲಕ್ಷಣವಾದ, ಸಮಸ್ತಸಾಕ್ಷಿಂ=ಸಕಲ ಭೂತಪ್ರಪಂಚಕ್ಕೂ ಸಾಕ್ಷಿಯಾದ, ಭೂತಯೋನಿಂ=ಅಖಿಲ ಪ್ರಪಂಚಕ್ಕೆ ಅಭಿನ್ನನಿಮಿತ್ತೋಪಾದಾನಾತ್ಮಕವಾಗಿರುವ ಆ ಪರವಸ್ತುವನ್ನೇ ಭ್ರಮರಕೀಟ ನ್ಯಾಯದಿಂದ, ಗಚ್ಛತಿ=ಸಾಮರಸ್ಯಹೊಂದುತ್ತಾನೆ. ॥ ೭ ॥

**ತಾತ್ಪರ್ಯ :—** ಇಲ್ಲಿ ಮೂರು ಮಂತ್ರಗಳಿಗೆ ಏಕಾನ್ವಯವಿರುವುದರಿಂದ ಒಟ್ಟಿಗೆ ವ್ಯಾಖ್ಯಾನಮಾಡಲಾಗಿದೆ. ಮೊದಲನೆಯ ಮಂತ್ರವು ಸಾಧಕನ ಅರ್ಹತೆ, ಶಿವಾರಾಧನೆಗೆ ಯೋಗ್ಯವಾದ ಪ್ರದೇಶ, ಆಸನ ಶುದ್ಧಿ ಮುಂತಾದುವನ್ನು ನಿರ್ದೇಶಿಸುತ್ತದೆ.

ಮೊದಲನೆಯದಾಗಿ ಮುನಿ ಶಬ್ದವಾಚ್ಯನಾದ ಸಾಧಕನು ಅತ್ಯಾಶ್ರಮಿಯಾಗಿರಬೇಕೆಂಬುದು '**ಅತ್ಯಾಶ್ರಮಸ್ಥಃ**' ಎಂಬ ವಿಶೇಷಣದಿಂದ ವ್ಯಕ್ತವಾಗುತ್ತದೆ. ಅತ್ಯಾಶ್ರಮ ಶಬ್ದಕ್ಕೆ ಅವಯವಶಕ್ತಿಯಿಂದ ಕೇವಲ ಬ್ರಹ್ಮಚರ್ಯಾದಿ ಆಶ್ರಮಾತೀತನೆಂದು ಕಂಡುಬಂದರೂ ಉಪಲಕ್ಷಣ

ವಾಗಿ '**ಆಶ್ರಮ**' ಶಬ್ದದಿಂದ '**ವರ್ಣ**'ವೆಂಬ ವಿಶೇಷಾರ್ಥವನ್ನೂ ಗ್ರಹಿಸಬೇಕು. ಏಕೆಂದರೆ ವರ್ಣವಿರಹಿತವಾದ ಆಶ್ರಮಧರ್ಮವು ವ್ಯವಹಾರದಲ್ಲಿಲ್ಲ. ಆದುದರಿಂದ ಅತಿವರ್ಣಾಶ್ರಮ ಶೀಲನಾದವನೇ ಮೋಕ್ಷಕ್ಕೆ ಅಧಿಕಾರಿಯೆಂದು ಸ್ಪಷ್ಟವಾಗುತ್ತದೆ. ಇದರಿಂದ ವರ್ಣಾಶ್ರಮ ವಿಶಿಷ್ಟ ಪ್ರಾಕೃತ ಧರ್ಮಾವಲಂಬನೆಯು ಪರಮಪುರುಷಾರ್ಥಪ್ರದವಲ್ಲವೆಂದೂ ಅತಿವರ್ಣಾಶ್ರಮ ವಿಶಿಷ್ಟ ಅಪ್ರಾಕೃತ ಮಹಾಪಾಶುಪತಲಿಂಗದೀಕ್ಷಾವ್ರತಿಯೆಂದರೆ ವೀರಶೈವ ಶಿವಭಕ್ತನೆಂಬು ಬೇರೆ ಹೇಳಬೇಕಾದುದಿಲ್ಲ. ಬ್ರಾಹ್ಮಣಾದಿ ವರ್ಣಗಳನ್ನೂ, ಬ್ರಹ್ಮಚರ್ಯಾದಿ ಆಶ್ರಮಗಳನ್ನೂ ಅತಿಕ್ರಮಿಸಿ ಸ್ವಾತ್ಮಾನುಸಂಧಾನದಲ್ಲಿ ತೊಡಗಿ ಹೃದಬ್ಜಮಧ್ಯದಲ್ಲಿರುವ ಪ್ರಾಣಲಿಂಗವನ್ನು ನೆನೆದು ಆ ಚಿತ್‌ಪ್ರಕಾಶದಲ್ಲಿ ತಲ್ಲೀನನಾಗುವವನೇ "ಅತ್ಯಾಶ್ರಮಸ್ಥ"ನೆಂದು ಶ್ವೇತಾಶ್ವತರ ಶಾಖಿಗಳಾದ ಮುನಿಶ್ರೇಷ್ಠರು ಹೇಳುವರೆಂದು ಹೇಳುವರು. ಈ '**ಅತ್ಯಾಶ್ರಮವ್ರತವೇ ಪಾಶುಪತವ್ರತ**'ವೆಂದು ಕ್ರಿಯಾಸಾರ, ಅನುಭವಸೂತ್ರ ಮುಂತಾದ ಗ್ರಂಥಗಳಲ್ಲಿ ಉಕ್ತವಾಗಿದೆ.

ಇದರಿಂದ ಬ್ರಹ್ಮಚರ್ಯವೇ ಮೊದಲಾದ ಆಶ್ರಮಗಳೆಲ್ಲವನ್ನು ಬಿಟ್ಟಿರುವುದೇ ಅತ್ಯಾಶ್ರಮವೆಂದು ಭಾವಿಸಲು ಅವಕಾಶವಿಲ್ಲ. ಲಿಂಗಧಾರಿಯಾಗಿ ಲಿಂಗವ್ರತವನ್ನು ಪಾಲಿಸುವವನು ಯಾವ ಆಶ್ರಮದಲ್ಲಿದ್ದರೂ ಸಹ ಆತನು ಅತ್ಯಾಶ್ರಮಿಯೆನಿಸಿಕೊಳ್ಳುವನು. ಇದರಿಂದ ಲಿಂಗಧಾರಿಗಳೆಲ್ಲರೂ ಮೋಕ್ಷಾಧಿಕಾರಿಗಳೆಂದು ವ್ಯಕ್ತವಾಗುತ್ತದೆ. ಇದೇ ಅರ್ಥವನ್ನು

• ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ ।
ಯಸ್ತು ಲಿಂಗಾಂಗಸಂಯುಕ್ತಃ ಸ ಏವಾತ್ಯಾಶ್ರಮೀ ಭವೇತ್ ॥

ಎಂಬ ಪ್ರಮಾಣಗಳು ಸಮರ್ಥಿಸುತ್ತವೆ.

ಇನ್ನು ಶಿವಾರ್ಚನೆಗೆ ಯೋಗ್ಯವಾದ ಸ್ಥಾನನಿರ್ದೇಶವನ್ನು '**ವಿವಿಕ್ತದೇಶೇ**' ಎಂಬ ವಿಶೇಷಣದಿಂದ ಹೇಳಲಾಗಿದೆ. ಜನೋಪದ್ರವರಹಿತ ಪ್ರಶಾಂತ ಪ್ರದೇಶದಲ್ಲಿ, ಶಿವೋಪಾಸಕನು ಬಾಹ್ಯಾಭ್ಯಂತರ ಸ್ನಾನಗಳಿಂದಲೂ, ಸಾತ್ವಿಕಾಹಾರ ವಿಹಾರಾದಿನಿಯಮಗಳಿಂದಲೂ, ಪವಿತ್ರ

ಮನಸ್ಸುಳ್ಳವನಾಗಿರಬೇಕೆಂಬುದು 'ಶುಚಿಃ' ಎಂಬ ವಿಶೇಷಣದಿಂದ ಸೂಚಿತವಾಗಿದೆ. 'ಆಹಾರ ಶುದ್ಧವಾಗಿದ್ದರೆ ಸತ್ವಶುದ್ಧಿಯಾಗುತ್ತದೆ. ಸತ್ವಶುದ್ಧಿಯಿಂದ ಮನಸ್ಸು ದೃಢವಾಗುತ್ತದೆ. ಮನೋದಾರ್ಢ್ಯದಿಂದ ಕಾಯಜೀವರ ಹೊಲಿಗೆ (**ಸರ್ವಗ್ರಂಥೀನಾಂ ವಿಪ್ರಮೋಕ್ಷಃ**) ಯು ಸಡಲಿ ಬಿಡುಗಡೆಯೆಂದು' ಸೂತಸಂಹಿತೆಯಲ್ಲಿ ಹೇಳಿದೆ. ಸ್ವಸ್ತಿಕಾಸನವೇ ಮೊದಲಾದ ಸುಖಾಸನದಲ್ಲಿ

ನಾಸಾಗ್ರನ್ಯಸ್ತನಯನಃ ಸಂವೃತಾಸ್ಯಃ ಸುನಿಶ್ಚಲಃ ।
ಧ್ಯಾಯೀತ ಮನಸಾ ದೇವಮುರೋಽವಿಷ್ಟಭ್ಯ ಚಾಗ್ರತಃ ॥ ಎಂದರೆ
"ತುದಿಮೂಗಿನೊಳು ನೋಟ, ತುಟಿಮುಚ್ಚಿದಾನನವು
ಎದೆಯುಬ್ಬಿ ನಿಶ್ಚಲದಿ ಶಿವನ ನೆನೆ, ಎಲೆ ಮನವೆ!"

ಎಂಬಂತೆ ಕುಳಿತು ಕಣ್ಣು, ಕಿವಿ ಮೊದಲಾದ ಜ್ಞಾನೇಂದ್ರಿಯಗಳನ್ನೂ, ಕರಚರಣಾದಿ ಕರ್ಮೇಂದ್ರಿಯಗಳನ್ನೂ, ಯಮನಿಯಮಗಳಿಂದ ನಿಗ್ರಹ ಮಾಡಬೇಕು. 'ಆತ್ಮನೇ ರಥಿಕ, ಶರೀರವೇ ರಥ, ಇಂದ್ರಿಯಗಳೇ ಅಶ್ವಗಳು, ಮನಸ್ಸು ಹಗ್ಗ, ಬುದ್ಧಿಯೇ ಸಾರಥಿ, ವಿಷಯಗಳೇ ಹಾದಿ ಯಾದುದರಿಂದ ಆತ್ಮನು ಮನಸ್ಸಿನ ಮೂಲಕ ವಿಷಯಗಳ ಮೇಲೆ ಸ್ವೇಚ್ಛೆಯಿಂದ ಹರಿಯುತ್ತಿರುವ ಇಂದ್ರಿಯಗಳನ್ನು ಯಮನಿಯಮಾದಿ ಯೋಗಮಾರ್ಗದಿಂದ ತಡೆದು ಗುರುಧ್ಯಾನಮಾಡಬೇಕು.

**'ಶಿವಪಥವನರಿವೊಡೆ ಗುರುಪಥವೆ ಮೊದಲು'** ಎಂಬ ಶಿವಶರಣರ ವಚನದಂತೆ ತನಗೆ ಶಿವಜ್ಞಾನವನ್ನು ಉಪದೇಶಮಾಡಿದ ಗುರುವನ್ನು ಪ್ರಥಮತಃ ನೆನೆವುದು ಸಾಧಕನ ಆದ್ಯಕರ್ತವ್ಯ. **'ನಾಸ್ತಿ ತತ್ವಂ ಗುರೋಃ ಪರಂ'** ಗುರುತತ್ತ್ವಕ್ಕಿಂತ ಮಿಗಿಲಾದುದಿಲ್ಲ. **'ಹರ ಮುನಿದರೆ ಗುರು ಕಾಯ್ವನು, ಗುರು ಮುನಿದರೆ ಕಾಯ್ವರಿಲ್ಲ'** ಗುರು ಸಾಕ್ಷಾತ್ ಪರಶಿವನು. ಅವನು ಭಕ್ತನ ಹೃದಯದಲ್ಲಿ ತುಂಬಿ ರುವ ಅಜ್ಞಾನಾಂಧಕಾರವನ್ನು ತೊಲಗಿಸಿ ಶಿವಭಾವವನ್ನುಂಟುಮಾಡು ವನು. ಆದ್ದರಿಂದಲೇ ಶ್ರುತಿಯು **'ಆಚಾರ್ಯದೇವೋ ಭವ'** ಎಂದು ಅಪ್ಪಣೆಮಾಡಿದೆ. **'ಮಂತ್ರವ್ಯಾಖ್ಯಾಕೃದಾಚಾರ್ಯಃ'** ಎಂಬ ನಿಘಂಟುವಿನಂತೆ ವೇದವೇದಾಂತಾದಿ ಶಾಸ್ತ್ರಗಳನ್ನು ಅಭ್ಯಸಿಸಿ ತಾನು

ಅನುಷ್ಠಾನಮಾಡಿ ತನ್ನ ಅನುಭವಾಮೃತವನ್ನು ಉಪದೇಶಮಾಡಿರು ವುದರಿಂದ ಅವನೇ ತನ್ನೆಲ್ಲ ಅಭ್ಯುದಯ ನಿಶ್ಶ್ರೇಯಸ್ಸುಗಳಿಗೂ ಕಾರಣನು. 'ಗುರುಭಕ್ತಿ ವಿಹೀನನಾದವನಿಗೆ ಶಿವಭಕ್ತಿಯುದಿಸುವುದಿಲ್ಲ. ಆದುದ ರಿಂದ ಶಿವನಲ್ಲಿ ಹೇಗೆಯೋ ಹಾಗೆಯೇ ಗುರುವಿನಲ್ಲಿಯೂ ಭಕ್ತಿಯಿಡ ಬೇಕು' (ಸಿ. ಶಿ. ಪ. ೧೧). ಆದುದರಿಂದ ಸಾಧಕನು ಮೊದಲು ಮಹಾಚಾರ್ಯರನ್ನು ತತ್ಸೂತ್ರಾನುವರ್ತಿಯಾದ ತನ್ನ ದೀಕ್ಷಾಗುರು ವನ್ನು ಪರಮಭಕ್ತಿಯಿಂದ ನೆನೆಯಬೇಕು. ॥ ೫ ॥

ಮುಂದಿನ ಎರಡು ಮಂತ್ರಗಳಲ್ಲಿ ಸಾಧಕನು ತನ್ನ ಹೃದಯಕಮಲ ದಲ್ಲಿರುವ ಶುದ್ಧಸ್ವರೂಪನಾದ ಪರಮಾತ್ಮನ ಲಕ್ಷಣವನ್ನು ಹೇಳಿ ಅಂತಹ ಪರವಸ್ತುವನ್ನು ಧ್ಯಾನಮಾಡುತ್ತಾ ಅದನ್ನೇ ಹೊಂದಬೇಕೆಂದು ನಿರೂಪಿಸಿದೆ.

ಮಾನವನ ಹೃದಯ ಕೋಶವು ತಾವರೆಯ ಮೊಗ್ಗಿನಂತೆ ಇರುವುದ ರಿಂದ ಅದನ್ನು ಹೃತ್ಪುಂಡರೀಕವೆಂದು ಕರೆಯುತ್ತಾರೆ. ಅಂಥ ಹೃದಯ ಕಮಲದಲ್ಲಿ '**ವಿಶದಂ, ವಿಶೋಕಂ**' ಮುಂತಾದ ವಿಶೇಷಣಗಳಿಂದ ಕೂಡಿರುವ ಉಮಾಸಹಾಯನಾದ ಪರಶಿವನ ಸ್ವರೂಪವನ್ನು ಹೇಳಿದೆ. ಹೃದಯಕೋಶದಲ್ಲಿರುವ ಅವಕಾಶವನ್ನು '**ಮಹದಾಕಾಶ**'ವೆಂದೂ, ಅದನ್ನು ನಿರ್ವಚನ ಮಾಡಲು ಅಸಾಧ್ಯವಾಗಿರುವುದರಿಂದ '**ಶೂನ್ಯಲಿಂಗ**' ವೆಂದೂ, '**ಪರಮಾಕಾಶ**'ವೆಂದೂ ಕರೆಯುತ್ತಾರೆ.

ಶಿವಾಖ್ಯಂ ಪರಮಂ ಬ್ರಹ್ಮ ಪರಮಾಕಾಶಲಕ್ಷಣಮ್ ।
ಲಿಂಗಮಿತ್ಯುಚ್ಯತೇ ಸದ್ಭಿಃ ಯದ್ವಿನಾ ನ ಜಗತ್ ಸ್ಥಿತಿಃ ॥
(ಸಿ. ಶಿ. ಪ. ೧೯-೬೯)

ಎಂಬ ರೇಣುಕ ಭಗವತ್ಪಾದಾಚಾರ್ಯರ ಉಕ್ತಿಯಂತೆ ಹೃದಬ್ಜಕೋಶ ದಲ್ಲಿರುವ ಪರಮಾಕಾಶವೇ ಪ್ರಾಣಲಿಂಗ. ಅದು ಮಾನವನ ಅಂಗುಷ್ಠ ಪರಿಮಾಣವುಳ್ಳದ್ದಾಗಿದೆ. '**ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ**' '**ಅಂಗುಷ್ಠಮಾತ್ರಮಚಲಂ ಧ್ಯಾಯೇತ್**' '**ಹೃದಬ್ಜೇ ಜ್ವಲಂತ ಮಂಗುಷ್ಠಮಿತಂ ಪುರಾಣಂ ಲಿಂಗಸ್ವರೂಪಂ**' ಎಂದು ಶ್ವೇತಾಶ್ವತರ, ಶಂಕರಸಂಹಿತೆ, ವೀ. ಧರ್ಮಶಿರೋಮಣಿ ಮುಂತಾದ ಪ್ರಮಾಣಗಳಿಂದ

ಹೃದಯಕೋಶದಲ್ಲಿರುವ ಪ್ರಾಣಲಿಂಗವೆಂದು ಕರೆಯಲ್ಪಟ್ಟಿದೆ. **'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್'** (ಬ್ರ. ಸೂ. ೧-೩-೮-೨೫) ಎಂಬ ಬ್ರಹ್ಮಸೂತ್ರದಲ್ಲಿಯೂ ಸಹ ಮಾನವನು ಶಾಸ್ತ್ರಾಧಿಕಾರಿಯಾದುದರಿಂದ ಅವನ ಅಂಗುಷ್ಠಪರಿಮಾಣವೇ ಹೃದಯಕೋಶಾಂತರ್ವರ್ತಿ ಆಕಾಶಕ್ಕೆ ಹೋಲಿಸಿರುವುದೆಂದೂ, ಆದುದರಿಂದಲೇ ಹೃದಯಾಂತರ್ವರ್ತಿಯಾದ ಆಕಾಶವೇ ಪರಮಾತ್ಮನ ಪರಿಮಿತ ಆಕಾರವೆಂದೂ ಹೇಳಿ ಅದು ಲಿಂಗಾಕಾರವಾಗಿರುವುದರಿಂದ ಲಿಂಗರೂಪಸಿದ್ಧಿಯಾಗುವುದೆಂದು ಶ್ರೀಕರ ಭಾಷ್ಯದಲ್ಲಿಯೂ, ಅಪ್ಪಯ್ಯದೀಕ್ಷಿತರು ತಮ್ಮ ಪಂಚರತ್ನಸ್ತುತಿಯಲ್ಲಿಯೂ ಸಿದ್ಧಿಮಾಡಿದ್ದಾರೆ. ಆದುದರಿಂದಲೇ ಶ್ರುತಿಯು ಹೃತ್ಪುಂಡರೀಕದ ಮಧ್ಯದಲ್ಲಿ ಶುದ್ಧಸ್ಫಟಿಕದಂತೆ ಸ್ವಚ್ಛವೂ, ವಿಶೋಕವೂ, ಅಚಿಂತ್ಯಾದಿ ವಿಶೇಷಣ ವಿಶಿಷ್ಟವೂ ಆದ ಪರಬ್ರಹ್ಮವನ್ನು ಧ್ಯಾನಿಸಬೇಕೆಂದು ಹೇಳಿದೆ. ॥ ೬ ॥

ಇನ್ನು **'ಉಮಾಸಹಾಯಂ'** ಎಂಬ ವಿಶೇಷಣವು ಪರಮಾತ್ಮನು ಸೂಕ್ಷ್ಮಚಿದಚಿದಾತ್ಮಕ ವಿಮರ್ಶಶಕ್ತಿ ವಿಶಿಷ್ಟನೆಂಬುದನ್ನು ಸ್ಥಾಪಿಸುತ್ತದೆ. ಇದರಿಂದ ಕೇವಲ ನಿರ್ಗುಣ ಬ್ರಹ್ಮವು ಶ್ರುತಿತಾತ್ಪರ್ಯವಿಷಯವಲ್ಲವೆಂದು ವ್ಯಕ್ತವಾಗುತ್ತದೆ. ಆದುದರಿಂದಲೇ ಅನೇಕ ಆಚಾರ್ಯರು ಶಕ್ತಿವಿಶಿಷ್ಟ ಬ್ರಹ್ಮಸಾಧನೆಗೆ ಈ ಶ್ರುತಿಯನ್ನು ಮುಖ್ಯ ಪ್ರಮಾಣಗಳಲ್ಲಿ ಅಂಗೀಕರಿಸಿರುತ್ತಾರೆ.

ಪರಮಾತ್ಮನು ಜಗತ್ತಿಗೆ ಉಪಾದಾನಕಾರಣನೂ ನಿಮಿತ್ತಕಾರಣನೂ ಆಗಿದ್ದಾನೆ. ಲೋಕದಲ್ಲಿ ಘಟಕ್ಕೆ ಮೃತ್ ಉಪಾದಾನಕಾರಣ. ಕುಲಾಲನು ನಿಮಿತ್ತಕಾರಣ. ಆದರೆ ಪರಮಾತ್ಮನು ವಿಲಕ್ಷಣ ಕಾರಣನಾಗಿದ್ದಾನೆ. **'ತತ್ಸೃಷ್ಟ್ವಾ ತದೇವಾನುಪ್ರಾವಿಶತ್'** (ತೈತ್ತಿರೀಯ, ಆನಂದವಲ್ಲಿ ೬) 'ಪರಮಾತ್ಮನು ತನ್ನೊಳಗೆ ಸೂಕ್ಷ್ಮವಾಗಿರುವ ಜಗತ್ತನ್ನು ಸ್ಥೂಲರೂಪವಾಗಿ ಸೃಷ್ಟಿಸಿ ತಾನೂ ಅದರೊಳಗೆ ಪ್ರವೇಶಿಸಿದನು.' **'ಬಹುಸ್ಯಾಂ ಪ್ರಜಾಯೇಯ'** (ಛಾಂದೋಗ್ಯ ೬-೨೩) 'ನಾನೇ ನಾನಾ ವಿಧವಾದ ರೂಪವನ್ನು ಹೊಂದುವೆನು.' **'ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ....'** (ಮುಂಡಕ ೧-೧-೭) 'ಜೇಡರಹುಳುವು

ತನ್ನ ವಿಶಿಷ್ಟರೂಪದಿಂದಲೇ ಜಾಲವನ್ನು ನಿರ್ಮಿಸಿ, ತಿರುಗಿ ತನ್ನ ವಿಶ್ಲಿಷ್ಟ ರೂಪದಲ್ಲಿಯೇ ಆ ಜಾಲವನ್ನು ಅಡಗಿಸಿಕೊಳ್ಳುವಂತೆ' **'ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ'** (ಸಿ. ಶಿ. ಪ. ೧೦–೬೫–೬೬) 'ತನ್ನ ವಿಮರ್ಶಶಕ್ತಿಯ ಸ್ಫುರಣದಿಂದ ಶಿವನು ಜಗದ್ರೂಪವಾಗಿ ಪರಿಣಮಿಸುತ್ತಾನೆ.' ಒಂದೇ ಪಟವು ಗುಡಾರವಾಗಿಯೂ, ವೃಕ್ಷವು ಪತ್ರ ಪುಷ್ಪ ಶಾಖೆಗಳ ರೂಪದಲ್ಲಿಯೂ, ಆಲದ ಬೀಜದಲ್ಲಿ ಆ ವೃಕ್ಷದ ಪತ್ರಪುಷ್ಪಾದಿಗಳೆಲ್ಲವೂ ಅಡಗಿರುವಂತೆ' (ಸಿ. ಶಿ. ಪ. ೧೦) ಪರಮಾತ್ಮನು ಸಮಸ್ತಕ್ಕೂ ಸಾಕ್ಷಿಯಾಗಿಯೂ, ಸಮಸ್ತಭೂತ ಪ್ರಪಂಚಕ್ಕೂ ಕಾರಣನಾಗಿಯೂ ಇರುವುದರಿಂದ ಅವನಿಗೆ ನಿಮಿತ್ತಕಾರಣತ್ವ ಹಾಗೂ ಉಪಾದಾನ ಕಾರಣತ್ವ ಸಂಭವಿಸುವುದೆಂದು **'ಸಮಸ್ತಸಾಕ್ಷಿಂ, ಭೂತಯೋನಿಂ'** ಎಂಬ ವಿಶೇಷಣಗಳಿಂದ ವ್ಯಕ್ತವಾಗುತ್ತದೆ. ಜಗತ್ಕಾರಣತ್ವವು ಪರಮೇಶ್ವರನಿಗೇ ಹೊರತು ಜಡವಾದ ಕೇವಲ ಮಾಯೆಗಲ್ಲ. ಮಾಯಾವಿಶಿಷ್ಟ ಪರಮಾತ್ಮನೇ ಜಗದ್ರೂಪನಾಗಿ ಪರಿಣಮಿಸುತ್ತಾನೆ. ಇದೇ ವಿಷಯವು **'ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ' 'ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ' 'ವಿಶ್ವಾಧಿಕೋ ರುದ್ರಃ' 'ಸರ್ವೋ ವೈ ರುದ್ರಃ'** ಮುಂತಾದ ಶ್ರುತಿಗಳಲ್ಲಿಯೂ **''ಸಾಕ್ಷಾಚ್ಚೋಭಯಾಮ್ನಾನಾತ್''** (ಬ್ರ. ಸೂ. ೧–೪–೨೫) **'ಯೋನಿಶ್ಚ ಹಿ ಗೀಯತೇ'** (ಬ್ರ. ಸೂ. ೧–೪–೮–೨೭) **'ಆತ್ಮಕೃತೇಃ ಪರಿಣಾಮಾತ್'** (ಬ್ರ. ಸೂ. ೧–೪–೨೬) ಎಂಬ ಬ್ರಹ್ಮಸೂತ್ರಭಾಷ್ಯಗಳಲ್ಲಿಯೂ ವಿಸ್ತಾರವಾಗಿ ಸಿದ್ಧಾಂತಮಾಡಲ್ಪಟ್ಟಿದೆ.

**ಶಂಕೆ:**—ಪರಮೇಶ್ವರನು ತಮೋಗುಣ ಪ್ರಧಾನನೂ, ಜಗತ್ತಿನ ಲಯಕರ್ತೃವೂ ಆಗಿರುವುದರಿಂದ ಅವನು ತಮಃ ಪ್ರಕೃತಿಯುಳ್ಳವನು. ಆದ್ದರಿಂದ ಅವನಲ್ಲಿ ಅಜ್ಞಾನ, ತಮಸ್ಸು, ಕ್ರೋಧ, ಮೋಹಾದಿ ಅಮಂಗಲ ಗುಣಗಳೇ ಇರುವುದರಿಂದ ಅವನಿಗೆ ನಿತ್ಯತ್ವ, ಶುದ್ಧತ್ವ, ಸರ್ವಜ್ಞತ್ವಾದಿ ಧರ್ಮಗಳು ಅನ್ವಯಿಸಲಾರವು.

**ಸಮಾಧಾನ :**—ಬಾದರಾಯಣನ **'ಅತ್ತಾ ಚರಾಚರಗ್ರಹಣಾತ್'** (ಬ್ರಂ. ಸೂ. ೧–೨. ೨–೯) ಸೂತ್ರದಲ್ಲಿ ಈ ವಿಷಯವನ್ನು

ವಿಚಾರಮಾಡಿ ಪರಮಾತ್ಮನಿಗೆ ಸರ್ವಸಂಪತ್ಕರ್ತೃತ್ವಾದಿಗಳಿದ್ದರೂ ತಮಸಃ ಪರತ್ವವೇ ಸಿದ್ಧಿಸುವುದೆಂಬುದನ್ನು ಸಿದ್ಧಾಂತಮಾಡಿದೆ.

**'ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ, ಮೃತ್ಯುರ್ಯಸ್ಯೋಪಸೇಚನಂ'** ಮುಂತಾದ ಶ್ರುತಿಗಳಲ್ಲಿ ಮೃತ್ಯೂಪಸೇಚನೆ(ಮೃತ್ಯುಸಹಾಯ)ಯುಳ್ಳ ಬ್ರಹ್ಮಕ್ಷತ್ರೋಪಲಕ್ಷಿತ (ಕಠ. ಅ. ೧. ವಲ್ಲಿ ೨–೨೫) ಸಕಲಚರಾಚರ ಪ್ರಪಂಚವೂ ಶಿವನಿಗೆ ಒದನ (ಅನ್ನ) ವಾಗಿದೆ. **'ತಜ್ಜಲಾನೀತಿ ಶಾಂತ ಉಪಾಸೀತ'** ಎಂದು ಶ್ರುತಿವಾಕ್ಯದಲ್ಲಿರುವ **'ತಜ್ಜಲಾನಿ'** ಎಂಬ ಪದವು ಜಗತ್ಸೃಷ್ಟಿ ಸ್ಥಿತಿಲಯಾತ್ಮಕತ್ವವು ಪರಶಿವನಿಗಿದೆಯೆಂಬುದನ್ನು ಸೂಚಿಸುತ್ತದೆ. **'ತಸ್ಮಾತ್ ಜಾಯತ ಇತಿ ತಜ್ಜಂ, ತಸ್ಮಿನ್ ಲೀಯತ ಇತಿ ತಲ್ಲಂ, ತಸ್ಮಾತ್ ಅನತೀತಿ, ಚೇಷ್ಟತ ಇತಿ ತದನಂ; ತಜ್ಜಂ ಚ, ತಲ್ಲಂ ಚ, ತದನಂ ಚ ತಜ್ಜಲಾನಿ' (ಅವಯುವಲೋಪಶ್ಛಾಂದಸಃ)** ಎಂಬ ವ್ಯುತ್ಪತ್ತಿಯಿಂದ ಪರಶಿವನೇ ಸೃಷ್ಟ್ಯಾದಿ ಕರ್ತನೆಂದು ವ್ಯಕ್ತವಾಗುತ್ತದೆ. **'ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ' 'ನಿಧನಪತಯೇ ನಮಃ' 'ಮಹಾಗ್ರಾಸಾಯ ನಮಃ' 'ಇಮಾನಿ ವಿಶ್ವಾನಿ ಜುಹ್ವತಿ' 'ಯತೋ ವಾ ಇಮಾನಿ ಭೂತಾನಿ ಜಾಯಂತೇ'** ಮುಂತಾದ ಶ್ರುತಿಗಳಲ್ಲಿ ಚರಾಚರಪ್ರಪಂಚದ ಜನ್ಮ ಸ್ಥಿತಿ ಲಯ ಕರ್ತೃತ್ವವು ಪರಮೇಶ್ವರನಿಗೆ ಹೇಳಿರುವುದರಿಂದಲೂ **'ಅನಶ್ನನ್ನನ್ಯೋ ಅಭಿಚಾಕಶೀತಿ'** ಎಂಬುದರಿಂದ ಜಗತ್ಸಾಕ್ಷಿಕತ್ವವು ಸಿದ್ಧವಾಗಿರುವುದರಿಂದಲೂ, **'ಯದಾ ತಮಸ್ತನ್ನ ದಿವಾ ನ ರಾತ್ರಿರ್ನಸನ್ನ ಚಾಸಚ್ಛಿವ ಏವ ಕೇವಲಃ'** ಮುಂತಾದ ಶ್ರುತಿಗಳಲ್ಲಿ ಶಿವನಿಗೆ ಪ್ರಳಯದಲ್ಲಿಯೂ ಜಗತ್ಸಾಕ್ಷಿತ್ವವೂ ತಮಸಃ ಪರತ್ವವೂ ಸಿದ್ಧವಾಗಿದೆ. **'ತಾನಿ ಪರೇ ತಥಾ ಹ್ಯಾಹ'** (ಬ್ರಂ. ಸೂ. ೪–೨–೭–೧೫) ಎಂಬ ಸೂತ್ರ ಭಾಷ್ಯದಲ್ಲಿಯೂ ಸಹ ಶಿವನಿಗೆ ತಮಸಃ ಪರತ್ವವು ಸಮರ್ಥಿಸಲ್ಪಟ್ಟಿದೆ. ಆದುದರಿಂದ ಇಂಥ ಪರಮಾತ್ಮನನ್ನು ಸಾಧಕನು ತ್ರಿಕಾಲಗಳಲ್ಲಿಯೂ ಸ್ವಸ್ವರೂಪಾನುಸಂಧಾನ ಪೂರ್ವಕ ಉಪಾಸಿಸಿ ಅವನನ್ನೇ ಭ್ರಮರಕೀಟ ನ್ಯಾಯದಿಂದ ಹೊಂದಬೇಕೆಂದು ತಾತ್ಪರ್ಯವು. ॥ ೭ ॥

# ಮೂಲ

**ಸ ಬ್ರಹ್ಮಾ ಸ ಶಿವಃ ಸೇಂದ್ರಃ ಸೋಽಕ್ಷರಃ ಪರಮಸ್ವರಾಟ್ । ಸ ಏವ ವಿಷ್ಣುಃ ಸ ಪ್ರಾಣಃ ಸ ಕಾಲೋಽಗ್ನಿಃ ಸ ಚಂದ್ರಮಾಃ ॥ ೮ ॥**

**ಸ ಏವ ಸರ್ವಂ ಯದ್ ಭೂತಂ ಯಚ್ಚ ಭವ್ಯಂ ಸನಾತನಮ್ । ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ ॥ ೯ ॥**

**ಅರ್ಥ :**—ಹಿರಿದಕ್ಕಿಂತಲೂ ಹಿರಿದಾದುದರಿಂದ ಬ್ರಹ್ಮ, ಮಂಗಳಕರನಾದ್ದರಿಂದ ಶಿವ, ಪರಮೈಶ್ವರ್ಯವುಳ್ಳವನಾದ್ದರಿಂದ ಇಂದ್ರ, ನಾಶವಿಲ್ಲದವನಾದ್ದರಿಂದ ಅಕ್ಷರ, ಸ್ವಾತ್ಮಸಾಮ್ರಾಜ್ಯದ ಸ್ವಾಮಿಯಾದ್ದರಿಂದ ಪರಮಸ್ವರಾಟ್, ಸರ್ವವ್ಯಾಪಕನಾದ್ದರಿಂದ ವಿಷ್ಣು, ಸರ್ವಕ್ಕೂ ಜೀವನಪ್ರದಾತೃವಾದ್ದರಿಂದ ಪ್ರಾಣ, ಭೂತಭವಿಷ್ಯದ್ವರ್ತಮಾನಾತ್ಮಕನಾದುದರಿಂದ ಕಾಲ, ತೇಜಃಸ್ವರೂಪನಾದ್ದರಿಂದ ಅಗ್ನಿ, ಜಗದಾಹ್ಲಾದಕನಾದ್ದರಿಂದ ಚಂದ್ರಮಾ, ಎಂಬುದಾಗಿ ಬ್ರಹ್ಮೇಂದ್ರಾದಿ ಪದಗಳ ಯೋಗವೃತ್ತಿಯಿಂದ ಜ್ಞಾತವಾಗುವ ಎಲ್ಲ ದೇವತೆಗಳೂ, ಸ ಏವ=ಆ ಪರವಸ್ತುವೇ, ಸರ್ವಂ=ಸಮಸ್ತವಾದ, ಯದ್ ಭೂತಂ ಯಚ್ಚ ಭವ್ಯಂ=ಯಾವುದು ವಿಭೂತಿಯುಳ್ಳದ್ದೂ, ಸಿರಿಯುಳ್ಳದ್ದೂ, ಪ್ರಭಾವವೂ, ಭವ್ಯವೂ, ಸನಾತನಂ=ಚಿರಂತನವಾದುದು ಆಗಿರುವುದೋ, ತಂ=ಅಂತಹ ಶಿವ ಜಗನ್ಮಯತ್ವ ಸರ್ವಗತತ್ವಾದಿಗಳಿಂದ ಕೂಡಿರುವ ಆ ಪರವಸ್ತುವನ್ನೇ ಜ್ಞಾತ್ವಾ=ಧ್ಯಾನ ಜ್ಞಾನಾತ್ಮಕವಾದ ಶಿವಯೋಗರೂಪ **ಮಹಾಮುಖ** ಮಾರ್ಗದಿಂದ ತಿಳಿದು (ಅನುಸಂಧಾನ ಮಾಡಿ) ಮುನಿಃ=ಸಾಧಕನು, ಮೃತ್ಯುಂ=ಜನನ ಮರಣಾತ್ಮಕವಾದ ಭವವನ್ನು, ಅತ್ಯೇತಿ=ದಾಟುತ್ತಾನೆ. ವಿಮುಕ್ತಯೇ=ಅಮೃತತ್ವಪ್ರಾಪ್ತಿಗಾಗಿ, ಅನ್ಯಃ ಕೋಽಪಿ ಪಂಥಾಃ=ಬೇರೆ ಯಾವ ಮಾರ್ಗವೂ, ನ ವಿದ್ಯತೇ=ಇರುವುದಿಲ್ಲ.

**ತಾತ್ಪರ್ಯ:**—ಹಿಂದಿನ ಮಂತ್ರದಲ್ಲಿ ಪರಶಿವನು ಜಗತ್ತನ್ನು ಸೃಷ್ಟಿಸಿ ಜಗದಧಿಪತಿಯಾಗಿ ಮತ್ತೆ ಜಗದ್ರೂಪವಾಗಿ ಪರಿಣಮಿಸಿರುವುದರಿಂದ ಅಭಿನ್ನನಿಮಿತ್ತೋಪಾದಾನ ಕಾರಣನಾಗಿರುವನೆಂದು ಹೇಳಲಾಯಿತು. ಈ ಮಂತ್ರವೂ ಸಹ ಬ್ರಹ್ಮೇಂದ್ರಾದಿ ಅನೇಕ ಹೆಸರುಗಳಿಂದ ಕರೆಯಲ್ಪಡುವ ಸಕಲದೇವತಾವಾಚ್ಯನಾದ ವಸ್ತುವು '**ಸರ್ವೋ ವೈ ರುದ್ರಃ**' ಎಂಬ ಶ್ರುತಿವಚನದಂತೆ ಒಬ್ಬನೆ ಪರಮಾತ್ಮನೆಂದು ದೃಢಪಡಿಸುತ್ತದೆ. ಮತ್ತು ಅನೇಕ ದೇವತಾವಾದದಿಂದ ಅಂತಃಕಲಹಗಳಿಗೆ ಎಡೆಗೊಟ್ಟು ಅನರ್ಥಕಾರಕವಾದ ಮತವೈಷಮ್ಯಗಳನ್ನು ಹೊರದೂಡಲು ಈ ಮಂತ್ರವು ಸಂಜೀವಿನಿಯಂತಿದೆ. '**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**' (ಋ. ೧–೧೬೪–೪೬) '**ತದೇವಾಗ್ನಿಸ್ತದಾದಿತ್ಯಸ್ತದ್ ವಾಯುಸ್ತದು ಚಂದ್ರಮಾಃ । ತದೇವ ಶುಕ್ರಂ ತದ್ ಬ್ರಹ್ಮ ತಾ ಆಪಃ ಸ ಪ್ರಜಾಪತಿಃ**' (ಯಜು ೩೨–೧) ಮುಂತಾದ ಶ್ರುತಿಗಳಲ್ಲಿ ಒಬ್ಬನೇ ಪರಮಾತ್ಮನು ಅನೇಕ ಹೆಸರುಗಳಿಂದ ಕರೆಯಲ್ಪಡುವನೆಂಬ ಸಿದ್ಧಾಂತವನ್ನೇ ಈ ಉಪನಿಷತ್ತು ಉದ್‌ಘೋಷಿಸಿದೆ. ಆದುದರಿಂದಲೇ ಶ್ರೀ ರೇಣುಕ ಭಗವತ್ಪಾದರು ಶಿವಜಗನ್ಮಯ ಸ್ಥಳದಲ್ಲಿ

> ಯಸ್ಮಾದೇತತ್ ಸಮುತ್ಪನ್ನಂ ಜಗದೇತಚ್ಚರಾಚರಮ್ ।
> ತಸ್ಮಾದೇತನ್ನಭಿದ್ಯೇತ ಯಥಾ ಕುಂಭಾದಿಕಂ ಮೃದಃ ॥ (ಪ. ೧೦)

ಎಂದು ಹೇಳಿದ್ದಾರೆ. ವಾಯುವೀಯ ಸಂಹಿತೆಯಲ್ಲಿ ಇದೇ ವಿಷಯವು.

> ಶಕ್ತ್ಯಾದಿ ಚ ಪೃಥಿವ್ಯಂತಂ ಶಿವತತ್ತ್ವಸಮುದ್ಭವಮ್ ।
> ತೇನೈಕೇನ ತು ತದ್ವ್ಯಾಪ್ತಂ ಯಥಾ ಕುಂಭಾದಿಕಂ ಮೃದಃ ॥

ಎಂದು ಹೇಳಿದೆ. ಅಂದರೆ ಮಣ್ಣು ಗಡಿಗೆಗೆ ಉಪಾದಾನ ಕಾರಣವಾಗಿರುವುದರಿಂದ ಗಡಿಗೆಯ ಒಳಗೂ ಹೊರಗೂ ಅದೇ ವ್ಯಾಪಿಸಿದೆ. ಅದರಂತೆ ಶಿವಸ್ವರೂಪವಾದ ಬ್ರಹ್ಮೇಂದ್ರಾದಿ ಸಮಸ್ತ ಜಗತ್ತೂ ಸಹ ತನ್ಮಯವೇ ಆಗಿರುತ್ತದೆ. ಸುವರ್ಣವು ಬೇರೆ ಬೇರೆ ನಾಮ ರೂಪುದಳೆದಿರುವ ಅನೇಕ ಆಭರಣಗಳಾಗಿದ್ದರೂ ಸಹ ವಸ್ತು ಒಂದೇ ಆಗಿರುವಂತೆ ಶಿವನೇ ಜಗದ್ರೂಪ

ವಾಗಿ ಪರಿಣಮಿಸಿರುವುದಲ್ಲದೆ ಜಗತ್ ಸಾಕ್ಷಿಯಾಗಿ ನಿಮಿತ್ತ ಕಾರಣತ್ವವನ್ನು ಹೊಂದಿದ್ದಾನೆ. "ಮಹಾದೇವನು ಸರ್ವಾತ್ಮಕನು. ಅವನೇ ಎಲ್ಲ ಪದಾರ್ಥಗಳನ್ನು ಬೆಳಗುವನು. ಅವನು ಪೂರ್ಣ. ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲಿರುವ ಜಗತ್ತೆಲ್ಲವೂ ಅವನೇ ಆಗಿದ್ದಾನೆ. ಅವನು ಸರ್ವಜ್ಞ, ಸರ್ವಸಾಕ್ಷಿ, ಸೃಷ್ಟಿ ಸ್ಥಿತಿ ಸಂಹಾರ ಕರ್ತೃ. ಅಲ್ಲದೆ ವಿಶ್ವಾಧಿಕನು. ವಿಶ್ವರೂಪನು. ಅವನಿಗೆ ಭವ, ಶರ್ವ, ಪಶುಪತಿ, ಉಗ್ರ, ಭೀಮ ಮುಂತಾದ ಅನೇಕ ಹೆಸರುಗಳಿವೆ. ಉಮಾಸಹಾಯನಾದ ಅವನು ನೀಲಕಂಠ ತ್ರಿಲೋಚನತ್ವಾದಿಗಳಿಂದ ಕರೆಯಲ್ಪಡುತ್ತಾನೆ. **'ಶಿವ, ರುದ್ರ, ಮಹಾದೇವ, ಶಂಕರ, ಬ್ರಹ್ಮ, ಸತ್, ಪರ'** ಮುಂತಾದ ಹೆಸರುಗಳು ಅವನಿಗೆ ವಿಶಿಷ್ಟವಾದವುಗಳು. ವಿಷ್ಣು, ನಾರಾಯಣಾದಿ ಹೆಸರುಗಳು ಯೋಗವೃತ್ತಿಯಿಂದ ಅವನಿಗೇ ಅನ್ವಯಿಸುತ್ತವೆ." "ವಿಶ್ವರೂಪನಾದ ಆ ಪರಮಾತ್ಮನೇ ಭಕ್ತನ ಆನನ (ಮುಖ) ದಲ್ಲಿ ಮಂತ್ರರೂಪವಾಗಿಯೂ, ಶಿರಸ್ಸಿನಲ್ಲಿ ಭಾವಲಿಂಗ ರೂಪವಾಗಿಯೂ, ಕುತ್ತಿಗೆಯಲ್ಲಿ ಇಷ್ಟಲಿಂಗ ರೂಪವಾಗಿಯೂ, ದಹರಾಕಾಶದಲ್ಲಿ ಪ್ರಾಣಲಿಂಗರೂಪವಾಗಿಯೂ ಇದ್ದಾನೆ." "ಅಗ್ನಿಯು ಎಲ್ಲ ವೃಕ್ಷಗಳಲ್ಲಿಯೂ ವ್ಯಾಪಿಸಿದ್ದರೂ ಸಹ ಅದು ಬನ್ನಿಮರದಲ್ಲಿ ವಿಶೇಷರೀತಿಯಿಂದ ಇರುವಂತೆ ಶಿವನು ಸರ್ವಗತನಾಗಿದ್ದರೂ ಗುರುಕಾರುಣ್ಯದಿಂದ ಇಷ್ಟಲಿಂಗದಲ್ಲಿ ವಿಶೇಷವಾಗಿ ನೆಲಸಿರುವುದರಿಂದ ಕಾಶಿ, ರಾಮೇಶ್ವರಾದಿ ತೀರ್ಥಕ್ಷೇತ್ರಗಳ ಚಾಪಲ್ಯವನ್ನು ಬಿಟ್ಟು ಇಷ್ಟಲಿಂಗೋಪಾಸನೆ ಮಾಡಬೇಕು." ಎಂಬುದಾಗಿ ಸೂತಸಂಹಿತೆ, ಶ್ವೇತಾಶ್ವತರ ಶ್ರುತಿ ಮತ್ತು ಸಿದ್ಧಾಂತ ಶಿಖಾಮಣಿ ಮುಂತಾದ ಗ್ರಂಥಗಳಲ್ಲಿ ವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ. **"ಅವಸ್ಥಿತೇರಿತಿ ಕಾಶಕೃತ್ಸ್ನಃ"** (ಬ್ರಂ. ಸೂ. ೧–೪. ೬–೨೨) ಎಂಬ ಸೂತ್ರ ಭಾಷ್ಯದಲ್ಲಿ ಶ್ರೀಪತಿ ಭಗವತ್ಪಾದಾಚಾರ್ಯರು ಶಿವನಿಗೆ ಸರ್ವದೇವತಾತ್ಮಕತ್ವ ಮತ್ತು ತದಧಿಪತಿತ್ವವನ್ನು ಸಿದ್ಧಾಂತ ಮಾಡಿರುತ್ತಾರೆ.

"ಅಂತಹ ಪರವಸ್ತು ಶಿಷ್ಯನ ಶಿಖಾಮಧ್ಯದಲ್ಲಿ ಪ್ರತಿಷ್ಠಿತವಾಗಿದೆ. ಅದೇ ಬ್ರಹ್ಮ, ಶಿವ, ಇಂದ್ರ ಅಕ್ಷರಾದಿ ಸಂಜ್ಞೆಗಳಿಂದ ಕರೆಯಲ್ಪಡುತ್ತದೆ. ಗುರುವು ದೀಕ್ಷಾ ಸಮಯದಲ್ಲಿ ಶಿಷ್ಯನ ಮಸ್ತಕದಲ್ಲಿನ ಆ ಚಿತ್ಕಲೆ

ಯನ್ನು ನಿಜಪ್ರಭಾವದ ದೆಸೆಯಿಂದ ಆಕರ್ಷಿಸಿ ಇಷ್ಟಲಿಂಗದಲ್ಲಿ ಪ್ರತಿಷ್ಠೆ ಮಾಡುತ್ತಾನೆ. ಅದನ್ನು ಧ್ಯಾನಜ್ಞಾನಾತ್ಮಕವಾದ **'ಮಹಾಮುಖ'** ವೆಂದು ಕರೆಯುವರು. ಶಿವಯೋಗ (ಷಟ್‌ಸ್ಥಲಮಾರ್ಗ) ದಿಂದ ಉಪಾಸನೆಮಾಡಿ ಶಿವತ್ವವನ್ನು ಪಡೆಯಬೇಕು. ಇದನ್ನೇ ಶ್ರುತಿಗಳು **"ಬ್ರಹ್ಮವೇದ ಬ್ರಹ್ಮೈವ ಭವತಿ," "ಈಶಂ ಜ್ಞಾತ್ವಾ ಅಮೃತಾ ಭವಂತಿ" "ತರತಿ ಶೋಕಮಾತ್ಮವಿತ್" "ಜ್ಞಾತ್ವಾ ಶಾಂತ ಮತ್ಯಂತಮೇತಿ"** ಎಂಬುದಾಗಿ ನಿರ್ವಚನ ಮಾಡಿವೆ. ಪುರುಷಸೂಕ್ತವು ಸಹ "ಅವನನ್ನು ತಿಳಿದು ಮೃತ್ಯುವನ್ನು ಗೆಲ್ಲುತ್ತಾನೆ. ಅಮೃತತ್ವವನ್ನು ಪಡೆಯಲು ಇದಕ್ಕಿಂತಲೂ ಬೇರೆ ದಾರಿಯಿಲ್ಲ" ವೆಂದು ಸೂಚಿಸುತ್ತದೆ. ॥ ೮, ೯ ॥

## ಮೂಲ

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಸಂಪಶ್ಯನ್ ಬ್ರಹ್ಮ ಪರಮಂ ಯಾತಿ ನಾನ್ಯೇನ ಹೇತುನಾ**
**॥ ೧೦ ॥**

ದಹರಾಕಾಶದಲ್ಲಿರುವ ಪರವಸ್ತುವಿನ ಸ್ವರೂಪವನ್ನು ಹೇಳಿ ಅವನೇ ಸರ್ವದೇವತಾ ವಾಚಕನೆಂಬುದನ್ನೂ ದೃಢಪಡಿಸಿ, ಈ ಮಂತ್ರದಲ್ಲಿ ಸಮಸ್ತಸ್ಥಾವರ ಜಂಗಮಾತ್ಮಕವಾದ ಪ್ರಪಂಚಕ್ಕೂ ಆ ಪರವಸ್ತುವಿಗೂ ಇರುವ ಸಂಬಂಧವನ್ನು ನಿರೂಪಿಸಲಾಗಿದೆ.

**ಅರ್ಥ :**—ಆತ್ಮಾನಂ=ಪರಮಾತ್ಮನನ್ನು ಸರ್ವಭೂತಸ್ಥಂ=ಹುಲ್ಲುಕಡ್ಡಿಯಿಂದ ಬ್ರಹ್ಮದವರೆಗಿನ ಸಕಲ ಚರಾಚರ ಭೂತಪ್ರಪಂಚದಲ್ಲಿ ಅಂತರ್ಯಾಮಿಯಾಗಿ ಅಡಗಿರುವನನ್ನಾಗಿಯೂ, ಆತ್ಮನಿ=ಆ ಪರವಸ್ತುವಿನಲ್ಲಿ ಸರ್ವಭೂತಾನಿ=ಸ್ಥಾವರ ಜಂಗಮಾತ್ಮಕ ಸಮಸ್ತವಸ್ತುಗಳೂ ನವಿಲಿನ ತತ್ತಿಯ ರಸದಲ್ಲಿ ಅದರ ಕರಚರಣಾದಿಗಳು ಸೂಕ್ಷ್ಮರೂಪದಿಂದ ಅಡಗಿರುವಂತೆ ಅಡಗಿರುವುವೆಂದು (ಮುನಿಃ=ಸಾಧಕನಾದ ಶಿವಭಕ್ತನು) ಸಂಪಶ್ಯನ್=ಗುರುಮುಖದಿಂದ ಚೆನ್ನಾಗಿ ತಿಳಿದು, ಪರಮಂ ಬ್ರಹ್ಮ=

ಆ ಪರಾತ್ಪರ ವಸ್ತುವನ್ನು ಯಾತಿ=ಸ್ವಸ್ವರೂಪದಿಂದ ಹೊಂದುತ್ತಾನೆ. ಅನ್ಯೇನ ಹೇತುನಾ=ಬೇರೆ ಮತ್ತಾವಮಾರ್ಗದಿಂದಲೂ ನ=ಹೊಂದಲು ಸಾಧ್ಯವಿಲ್ಲ.

**ತಾತ್ಪರ್ಯ :**—ಅಣುತೃಣಕಾಷ್ಠದಿಂದ ಹಿಡಿದು ಬ್ರಹ್ಮದವರೆಗಿನ ಎಲ್ಲವಸ್ತುಗಳಲ್ಲಿಯೂ ಮಣಿಮಾಲೆಯಲ್ಲಿ ಸೂತ್ರವು ಸೇರಿರುವಂತೆಯೂ ಬ್ರಹ್ಮಾಂಡದಲ್ಲಿನ ಸೂರ್ಯನಂತೆಯೂ, ಗುಹೆಯಲ್ಲಿನ ದೀಪದಂತೆಯೂ, ಘಟದಲ್ಲಿನ ಆಕಾಶದಂತೆಯೂ ಪರಮಾತ್ಮನು ಅಂತರ್ಯಾಮಿಯಾಗಿ, ವ್ಯಾಪಿಸಿದ್ದಾನೆ.

> ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯ, ಎಣಿಸುವೊಡೆ ತನು ಭಿನ್ನ. ಆತ್ಮನೊಬ್ಬನೆ. ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿಯುತಿಪ್ಪೆನಯ್ಯ, ರಾಮನಾಥಾ!"

ಅದರಂತೆಯೇ ಆ ಪರಮಾತ್ಮನಲ್ಲಿ ಆಲದ ಬೀಜದಲ್ಲಿ ಆ ಮರದ ಪತ್ರ ಪುಷ್ಪ ರೆಂಬೆಕೊಂಬೆಗಳೆಲ್ಲವೂ ಅವ್ಯಕ್ತವಾಗಿ ಅಡಗಿರುವಂತೆ ಸಮಸ್ತ ಭೂತ ಪ್ರಪಂಚವೂ ನಾಮರೂಪ ಕ್ರಿಯಾ ಶೂನ್ಯವಾಗಿ ಅಡಗಿರುತ್ತದೆ. ಗೀತೆಯು 'ಪ್ರತಿಯೊಂದು ಸ್ಥಾವರಜಂಗಮಾತ್ಮಕವಾದ ಭೂತವಸ್ತುವೂ ಹುಟ್ಟುವುದಕ್ಕೆ ಮೊದಲು ಮತ್ತು ನಾಶವಾದಮೇಲೆ ಅವ್ಯಕ್ತವಾಗಿಯೇ ಇರುತ್ತದೆ. ಆದರೆ ಮಧ್ಯದ ಅವಸ್ಥೆಯಲ್ಲಿ ಮಾತ್ರ ವ್ಯಕ್ತವಾಗಿರುತ್ತದೆ' (ಭ. ಗೀ. ಅ. ೨. ೨೮) ಎಂದು ಹೇಳಿರುವ ಅಭಿಪ್ರಾಯವು ಈ ಅರ್ಥವನ್ನು ಸಮರ್ಥಿಸುತ್ತದೆ.

'ಈಶ್ವರನು ಸರ್ವಭೂತಗಳ ಹೃದಯದಲ್ಲಿ ನೆಲೆಸಿದ್ದಾನೆ' 'ಆ ರುದ್ರ ರೂಪ ಪರಮಾತ್ಮನೇ ಬೆಂಕಿ, ನೀರು, ಓಷಧಿಗಳು ಮುಂತಾದ ಪ್ರಪಂಚ ದಲ್ಲಿ ಅಡಗಿದ್ದಾನೆ' 'ಆತನೇ ಸರ್ವಭೂತಗುಹಾಶಯನು' ಎಂದು ಮುಂತಾಗಿ ಅನೇಕ ಶ್ರುತಿಗಳಲ್ಲಿ ಹೇಳಿದೆ. "ಎಲ್ಲಕಡೆಯಲ್ಲಿಯೂ ಸಮ ಭಾವವನ್ನಿಟ್ಟ ಯೋಗಿಯು ತನ್ನನ್ನು ಸರ್ವಭೂತಗಳಲ್ಲಿಯೂ, ಸರ್ವ ಭೂತಗಳನ್ನು ತನ್ನಲ್ಲಿಯೂ ಕಾಣುತ್ತಾನೆ. ಯಾವನ ನನ್ನನ್ನು ಎಲ್ಲೆಡೆ ಯಲ್ಲಿಯೂ ಎಲ್ಲವನ್ನೂ ನನ್ನಲ್ಲಿಯೂ ನೋಡುತ್ತಾನೆಯೋ ಅವನು ನನ್ನಿಂದ ದೂರನಾಗುವುದಿಲ್ಲ. ನಾನೂ ಅವನಿಂದ ದೂರನಾಗುವುದಿಲ್ಲ.

ನನ್ನಲ್ಲಿ ಲೀನನಾಗಿ, ಸಮಸ್ತ ಭೂತಗಳಲ್ಲಿಯೂ ವಾಸಿಸುವ ನನ್ನನ್ನು ಭಜಿಸುವ ಯೋಗಿಯು, ಯಾವ ತೆರದಲ್ಲಿ ವರ್ತಿಸಿದರೂ, ನನ್ನಲ್ಲಿಯೇ ಇರುತ್ತಾನೆ'' (ಭ.ಗೀ. ಅ. ೬–೨೯–೩೦–೩೧). 'ಚಂದ್ರಕಾಂತಮಣಿಯಲ್ಲಿ ನೀರೂ, ಸೂರ್ಯಕಾಂತಮಣಿಯಲ್ಲಿ ಬೆಂಕಿಯೂ, ಬೀಜದಲ್ಲಿ ಮೊಳಕೆಯೂ ಹೇಗೆ ಅಡಗಿದೆಯೋ ಅದರಂತೆಯೇ ಆತ್ಮನಲ್ಲಿ ಶಿವನಿರುವನು' (ಸಿದ್ಧಾಂತ ಶಿಖಾಮಣಿ) ಎಂದು ಮುಂತಾಗಿ ಅನೇಕ ಪ್ರಮಾಣಗಳಿಂದ ಸಿದ್ಧನಾಗಿರುವ ಪರಮಾತ್ಮನನ್ನು ಶಾಸ್ತ್ರಾನುಭವಗಳಿಂದ ತಿಳಿದ ಸಾಧಕನು ಆ ಪರಶಿವನನ್ನು ಸ್ವಸ್ವರೂಪದಿಂದ ಹೊಂದುತ್ತಾನೆ. ಆದರೆ ಈ ಮಾರ್ಗದ ಹೊರತು ಬೇರೆ ಜ್ಯೋತಿಷ್ಟೋಮಾದಿ ಕರ್ಮಮಾರ್ಗದಿಂದ ಹೊಂದಲು ಸಾಧ್ಯವಿಲ್ಲ.

"ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ. ನೆರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ. ಶರೀರದೊಳಗಾತ್ಮನ ಆರಾರು ಕಾಣದಂತಿರಿಸಿದೆ. ನೀನಿರಿಸಿದ ಭೇದಕ್ಕೆ ಬೆರಗಾದೆನಯ್ಯ ರಾಮನಾಥಾ''

## ಮೂಲ

**ಆತ್ಮಾನಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಮ್।**
**ಧ್ಯಾನನಿರ್ಮಥನಾಭ್ಯಾಸಾತ್ ಪಾಪಂ ದಹತಿ ಪಂಡಿತಃ ॥೧೧॥**

ಮಾನವನು ಕರ್ಮವನ್ನು ಮಾಡುತ್ತಲೇ ಇರುತ್ತಾನೆ. ಇದರಿಂದ ಅವನಿಗೆ ಅವುಗಳಲ್ಲಿ ತಿಳಿದೊ ತಿಳಿಯದೆಯೋ ಪುಣ್ಯ ಅಥವಾ ಪಾಪಲೇಪ ವಾಗುತ್ತದೆ. ಇದರಿಂದ ಅವನು ಬ್ರಹ್ಮೋಪಾಸನೆಗಾಗಲಿ ಅಮೃತತ್ವ ಕ್ಕಾಗಲಿ ಅರ್ಹನಾಗಲಾರನು. ಆದುದರಿಂದ ಇಂಥ ಪಾಪ ಧ್ವಂಸಕ್ಕೆ ಪ್ರಣವಧ್ಯಾನವೊಂದೇ ಮುಖ್ಯಸಾಧನವೆಂಬುದನ್ನು '**ಆತ್ಮಾನಮರಣಿಂ**' ಎಂಬೀ ಮಂತ್ರವು ನಿರ್ದೇಶಿಸುತ್ತದೆ.

**ಅರ್ಥ:**—**ಪಂಡಿತಃ**=ಆತ್ಮಾನಾತ್ಮ ವಿವೇಕ ಶೀಲನಾದ (ಪಿಂಡಜ್ಞಾನಿ) ಅನುಭವಿಯು; ಆತ್ಮಾನಂ='ಆತ್ಮಾ ಚಿತ್ತೇ ಶರೀರೇ ಚ' ಎಂಬ

ನಿಘಂಟುವಿನಂತೆ ತನ್ನ ನಿರ್ಮಲ ಮನಸ್ಸನ್ನು ಅರಣಿಂ=ಯಜ್ಞಾಗ್ನಿಯನ್ನು ಸಂಪಾದಿಸುವ ಕೆಳಗಿನ ಕಟ್ಟಿಗೆಯನ್ನಾಗಿಯೂ, ಪ್ರಣವಂ=ಅಕಾರ ಉಕಾರ ಮಕಾರಾತ್ಮಕ ಓಂಕಾರ ಸ್ವರೂಪವಾದ ಪರಬ್ರಹ್ಮವನ್ನು ಉತ್ತರಾರಣಿಂ=ಮೇಲಿನ ಕಟ್ಟಿಗೆಯನ್ನಾಗಿಯೂ ಕೃತ್ವಾ=ಮಾಡಿ, ಧ್ಯಾನನಿರ್ಮಥನಾಭ್ಯಾಸಾತ್ = ತೈಲಧಾರೆಯಂತೆಯೂ, ಘಂಟೆಯ ದೀರ್ಘನಿನಾದದಂತೆಯೂ ಎಡೆಬಿಡದೆ ಪುನಶ್ಚರಣಾತ್ಮಕವಾದ ಧ್ಯಾನವೆಂಬ ಮಥನದ ಅಭ್ಯಾಸದಿಂದ ಪಾಪಂ=ಕೈ ಮಾತು ಮನಸ್ಸುಗಳಿಂದ ತಿಳಿದೊ ತಿಳಿಯದೆಯೋ ಮಾಡಿದ ಸಮಸ್ತಪಾಪವನ್ನು ದಹತಿ=ಭಸ್ಮಮಾಡುತ್ತಾನೆ. ಅಥವಾ ಪಾಶಂ ಎಂಬ ಪಾಠಾಂತರವಿರುವದರಿಂದ ಪಾಶಂ=ಅಣವಾದಿ ಮಲತ್ರಯರೂಪ ಪಾಶವನ್ನು ಪ್ರಣವಚಿಂತನೆಯಿಂದ ದಹತಿ=ನಾಶ ಮಾಡುತ್ತಾನೆ.

**ತಾತ್ಪರ್ಯ :—' ಮರ ಮರನ ಉಜ್ಜಿದಲ್ಲದೆ ಕಿಚ್ಚು ಉದಿಸದು '** ಎಂಬಂತೆ ಕಿಚ್ಚು ಉದಿಸಲು ಮಂಥನವು ಬೇಕು. ಅನಾದ್ಯವಿದ್ಯಾಸಂಬಂಧದಿಂದ ಶರೀರಧಾರಣೆಮಾಡಿದ ಆತ್ಮನಿಗೆ ತಾಮ್ರದಲ್ಲಿ ಕಾಳಿಕೆ (ಕಿಲುಬು) ಸ್ವಾಭಾವಿಕವಾಗಿ ಹತ್ತುವಂತೆ ಆಣವ, ಕಾರ್ಮಿಕ ಮತ್ತು ಮಾಯಾಮಲ ಲೇಪವಾಗಿರುತ್ತದೆ. ಮಲಮುಕ್ತನಾದ ಹೊರತು ಆತ್ಮನು ಶುದ್ಧನಾಗಲಾರನು. ಅದಕ್ಕಾಗಿ ಪ್ರಣವಾಭ್ಯಾಸ ಮುಖ್ಯ ಸಾಧನ. ಇದು ಶಿವದೀಕ್ಷೆಯಲ್ಲಿ ಪ್ರಧಾನವಾದ ಉಪಾಯವೆನಿಸಿದೆ.

ಯಜ್ಞಕ್ಕೆ ಸಾಧನವಾದ ಅಗ್ನಿಯನ್ನು ಉತ್ಪತ್ತಿಮಾಡಲು **' ಅರಣಿ ನಿರ್ಮಂಥನ '** (ಎರಡು ಅರಳಿಮರದ ತುಂಡುಗಳನ್ನು ಉಜ್ಜಿ ಬೆಂಕಿ ಹುಟ್ಟಿಸುವುದು) ಮಾಡುತ್ತಾರೆ. ಅದರಂತೆ ಇಲ್ಲಿ ಮನಸ್ಸು ಮತ್ತು ಪ್ರಣವಗಳೇ ಅರಣಿಗಳೆಂದೂ, ಧ್ಯಾನವೇ ಮಂಥನವೆಂದೂ ರೂಪಕ ಮಾಡಿದೆ. ಇದನ್ನೇ ಮತ್ತೊಬ್ಬ ಉಪನಿಷತ್ಕಾರನು ' ಪ್ರಣವವೇ ಧನುಸ್ಸು, ಆತ್ಮವೇ ಬಾಣ, ಬ್ರಹ್ಮವೇ ಗುರಿ. ಎಚ್ಚರಿಕೆಯಿಂದ ಬಾಣಾನುಸಂಧಾನ ಮಾಡಿ ಗುರಿಯನ್ನು ಭೇದಿಸಿದರೆ ಬಾಣವು ಗುರಿಯಲ್ಲಿ ಸೇರುವಂತೆ ಆತ್ಮನು ಬ್ರಹ್ಮವನ್ನು ಹೊಂದುತ್ತಾನೆ ' ಎಂದು ರೂಪಕಾಲಂಕಾರವಿಧಿಯಿಂದ ಹೇಳಿದ್ದಾನೆ.

## ಓಂಕಾರದ ವರ್ಣನೆ

ಓಂಕಾರವು ಅತ್ಯಂತ ವ್ಯಾಪಕವಾದ ಬ್ರಹ್ಮನಿರ್ದೇಶವು. ಸತ್ ಅಸತ್, ಕ್ಷರ ಅಕ್ಷರ, ದೃಶ್ಯ ಅದೃಶ್ಯ, ಆತ್ಮ ಅನಾತ್ಮ, ಚಿತ್ ಅಚಿತ್ ಇವೆಲ್ಲವೂ ಓಂಕಾರದಿಂದ ನಿರ್ದಿಷ್ಟವಾಗುವುವು. ಇದಲ್ಲದೆ ಆತ್ಮಾನಾತ್ಮ ಗಳಾಚೆಗಿರುವ ಅನಿರ್ದೇಶ್ಯವಾದ ಸತ್ಯವೂ ಓಂಕಾರದಿಂದ ನಿರ್ದಿಷ್ಟ ವಾಗಿರುವುದು. ಓಂಕಾರವು ಸರ್ವವನ್ನು ಒಳಕೊಂಡಿರುವುದೆಂದು ಮಾಂಡೂಕ್ಯದಲ್ಲಿ ಹೇಳಿರುವುದರಿಂದ ಇಲ್ಲಿ ಓಂಕಾರವು ಸರ್ವಪಾಪ ವಿಧ್ವಂ ಸಕವೆಂದು ಸಂಕ್ಷೇಪವಾಗಿ ಹೇಳಿದೆ. ಓಂಕಾರದಲ್ಲಿರುವ ಅಕಾರ ಉಕಾರ ಮಕಾರಗಳಿಗೆ ಕ್ರಮವಾಗಿ ವೈಶ್ವಾನರ, ತೈಜಸ ಮತ್ತು ಪ್ರಾಜ್ಞವೆಂಬ ಸಂಜ್ಞೆಗಳು ಬರುವುವೆಂದೂ, ಆತ್ಮನು ಜಾಗ್ರತ್ ಸ್ವಪ್ನ ಮತ್ತು ಸುಷುಪ್ತಿ ಗಳಲ್ಲಿ ಅವುಗಳನ್ನು ಅನುಭವಿಸಿ ಈ ಮೂರವಸ್ಥೆಗಳಿಗೂ ಆಚೆಗಿರುವ ತುರೀಯಾವಸ್ಥೆಯಲ್ಲಿ ಬ್ರಹ್ಮಸ್ವರೂಪ ತಳೆವನೆಂದೂ ಈ ಮಂತ್ರದಲ್ಲಿ ನಿರ್ದೇಶಿಸಿದೆ.

ಪೃಥಕ್ಕರಿಸಲ್ಪಟ್ಟ ಓಂಕಾರ ಪ್ರಣವ ಮೂರು ಭಾಗಗಳ ಅರ್ಥ ಗಳನ್ನು ಸಂಜ್ಞೆಗಳನ್ನೂ ತಿಳಿದಮೇಲೆ ಓಂಕಾರವು ನಾಲ್ಕನೆಯ, ತುರೀಯಾ ವಸ್ಥೆಯ ಸಂಜ್ಞೆ, ಅದು ಮಾತ್ರಾರಹಿತವು, ನಿರುಕ್ತ ರಹಿತವು, ಶಾಂತವು, ಅದ್ವೈತವು. ಅದರ ಜ್ಞಾನವೇ ಎಲ್ಲಕ್ಕೂ ಶ್ರೇಷ್ಠವಾದುದು. ಅದರ ಜ್ಞಾನ ದಿಂದಲೇ ಪರಮಸ್ಥಿತಿಯು ಪ್ರಾಪ್ತವಾಗುವುದು. ಇದೇ **ನಿರ್ವಿಕಲ್ಪ ಸಮಾಧಿಸ್ಥಿತಿ.** ಇದೇ **ಕೈವಲ್ಯಸ್ಥಿತಿ**ಯೆಂದು ಈ ಮಂತ್ರದಲ್ಲಿ ಉಕ್ತ ವಾಗಿದೆ.

"ಓಂಕಾರವು ಎಲ್ಲ ಮಂತ್ರಗಳಿಗೂ ಮೂಲವಾದುದು (ಕಠ.ಅಧ್ಯಾ. ೧. ವಲ್ಲಿ ೨. ಶ್ಲೋ. ೧೫-೧೬). ಮಾನವನು "ಪ್ರಣವಾಭ್ಯಾಸವೆಂಬ ನಾವೆಯಿಂದ ಸಂಸಾರಸಾಗರವನ್ನು ದಾಟುತ್ತಾನೆ. ಉಮಾರ್ಧವಿಗ್ರಹನೂ ಸತ್ಯಾದಿ ಲಕ್ಷಣನೂ ಆದ ಆ ರುದ್ರನೇ ಸಂಸಾರ ತಾರಕನೆಂಬುದೆ ಪ್ರಣವದ ಅರ್ಥ."

"ಯಾವುದನ್ನು ಜಪಿಸುವುದರಿಂದ ಮೋಕ್ಷವಾಗುತ್ತದೆ?" ಎಂದು ಕೇಳಿದಾಗ ಯಾಜ್ಞ್ಯವಲ್ಕ್ಯರು ಹೀಗೆ ಹೇಳಿದರು. (ಜಾಬಾಲೋಪನಿಷತ್ ೩)

"ಮೋಕ್ಷಪ್ರಾಪ್ತಿಗೆ ಶತರುದ್ರೀಯವೇ ಜಪ್ಯವಾದುದು. ಅದನ್ನು ಜಪಿಸುವುದರಿಂದ ಮಾನವನು ಮಹಾಪಾತಕ ಪಂಜರದಿಂದ ಬಿಡುಗಡೆ ಹೊಂದುತ್ತಾನೆ. ಶ್ರುತಿ ಸ್ಮೃತಿಗಳಲ್ಲಿಯೂ ಶತರುದ್ರೀಯಕ್ಕೆ ಸಮಾನ ವಾದ ಜಪ್ಯ ಮಂತ್ರವಿರುವುದಿಲ್ಲ. ಏಕೆಂದರೆ ಮಂತ್ರಮಾತೆಯೆಂದು ಹೇಳಲ್ಪಡುವ ಪಂಚಾಕ್ಷರಿಯು ಶತರುದ್ರೀಯ ಅಷ್ಟಮಾನುವಾಕದಲ್ಲಿ ಪಠಿತವಾಗಿದೆ. ಪಂಚಾಕ್ಷರಿಯಲ್ಲಿ ಮಹಾದೇವನು ಸದಾ ನೆಲೆಸಿರುತ್ತಾನೆ. ಈ ಮಂತ್ರವನ್ನು ಆಚಾರ್ಯನ ಮೂಲಕ ಉಪದೇಶಮುಖದಿಂದ ಪಡೆದು ಜಪಿಸಿದರೆ ಲೋಹರಸನ್ಯಾಯದಂತೆ ರಸವೇಧದಿಂದ ತಾಮ್ರವು ತನ್ನ ತಾಮ್ರತ್ವವನ್ನು ಅಳಿದು ಸುವರ್ಣವಾಗುವಂತೆ, ಪ್ರಣವಯುಕ್ತ ವಾದ ಪಂಚಾಕ್ಷರೀ ಜಪದಿಂದ ಜೀವನು ಶಿವತ್ವಹೊಂದುತ್ತಾನೆ." ಈ ವಿಷಯವು ಶಿಕ್ಷಾವಲ್ಲಿಯ ಅಷ್ಟಮಾನುವಾಕ ಭಾಷ್ಯದಲ್ಲಿ ವಿಸ್ತೃತ ವಾಗಿದೆ. ॥ ೧೧ ॥

# ಪ್ರಸಾದಿ ಪ್ರಾಣಲಿಂಗಿ ಸ್ಥಳಗಳು

ಶಿವನಿಗೆ ಅನರ್ಪಿತವಾದುದನ್ನು ಎಂದಿಗೂ ಸೇವಿಸದೆ ಇರುವುದು. ಮತ್ತು ಶಿವನಿಗೆ ಅರ್ಪಿತವಾದುದನ್ನು ಬಿಡದಿರುವುದು **ಪ್ರಸಾದಿಸ್ಥಲ**ವೆನಿಸುವುದು. ಅಲ್ಲಿಂದ ಮುಂದೆ ವಾಸನಾಕ್ಷಯವಾಗಿ ಎಲ್ಲ ಬಾಹ್ಯ ಪದಾರ್ಥಗಳ ಬಗ್ಗೆ ಇದ್ದ ಅನುರಾಗವು ನಷ್ಟವಾಗಿ ಲಿಂಗವೇ ತನ್ನ ಪ್ರಾಣವು, ತನ್ನ ಪ್ರಾಣ ಬೇರೆಯಲ್ಲ ಲಿಂಗ ಬೇರೆಯಲ್ಲವೆಂಬ ಭಾವ ಹೆಪ್ಪುಗೊಳ್ಳುವ ಸ್ಥಲವೇ **ಪ್ರಾಣಲಿಂಗಿಸ್ಥಲ.** ಜೀವನಿಗೆ ಈ ಅವಸ್ಥೆಯು ಪ್ರಾಪ್ತವಾಗುವುದನ್ನು ಇಲ್ಲಿ ನಿರೂಪಿಸಲಾಗಿದೆ.

## ಮೂಲ

**ಸ ಏವ ಮಾಯಾಪರಿಮೋಹಿತಾತ್ಮಾ ಶರೀರಮಾಸ್ಥಾಯ ಕರೋತಿ ಸರ್ವಮ್ । ಸ್ತ್ರ್ಯನ್ನಪಾನಾದಿ ವಿಚಿತ್ರಭೋಗೈಃ ಸ ಏವ ಜಾಗ್ರತ್ಪರಿತೃಪ್ತಿಮೇತಿ ॥ ೧೨ ॥**

**ಸ್ವಪ್ನೇ ಸ ಜೀವಃ ಸುಖದುಃಖಭೋಕ್ತಾ ಸ್ವಮಾಯಯಾ ಕಲ್ಪಿತಜೀವಲೋಕೇ । ಸುಷುಪ್ತಿಕಾಲೇ ಸಕಲೇ ವಿಲೀನೇ ತಮೋಽಭಿಭೂತಃ ಸುಖರೂಪಮೇತಿ ॥ ೧೩ ॥**

ತುರೀಯಾವಸ್ಥೆಯಲ್ಲಿ ಪ್ರಣವಾತ್ಮಕ ಇಷ್ಟಲಿಂಗಧ್ಯಾನದ ಮಹತ್ವವನ್ನು ಹೇಳಿ '**ಸ ಏವ ಮಾಯಾ**' ಎಂಬ ಎರಡು ಮಂತ್ರಗಳಿಂದ ಶಿವಲಿಂಗಾರ್ಪಣದ ವಿಧಾನವನ್ನು ಹೇಳುತ್ತಾನೆ.

**ಅರ್ಥ :**—ಸ ಏವ=ಪ್ರಣವಾತ್ಮಕ ಲಿಂಗರೂಪನಾದ ಪರಶಿವನೇ **ಮಾಯಾಪರಿಮೋಹಿತಾತ್ಮಾ**=ಅನಾದ್ಯವಿದ್ಯಾಸಂಬಂಧದಿಂದುಂಟಾದ ಕಿಂಚಿಜ್ಞತ್ವ ಕಿಂಚಿತ್ಕರ್ತೃತ್ವಾದಿ ಧರ್ಮಗಳಿಂದ ಕೂಡಿದವನೂ, ಸುಸಂಸ್ಕೃತನೂ, **ತ್ಯಾಗಾಂಗ**ಸಂಜ್ಞೆಯುಳ್ಳವನೂ ಆದ ಜೀವಾತ್ಮನು, **ಶರೀರಂ**=

ಇಂದ್ರಿಯ ವಿಶಿಷ್ಟವಾದ ದೇಹವನ್ನು, ಆಸ್ಥಾಯ=ಧರಿಸಿ, ಸ್ತ್ರ್ಯನ್ನಪಾನಾದಿ ವಿಚಿತ್ರಭೋಗೈಃ=ಹೆಂಗಸು, ಅನ್ನ, ಬಟ್ಟೆ ಮುಂತಾದ ಸಮಸ್ತ ಭೋಗ ಸಾಧನಗಳಿಂದ, ಸರ್ವಂ=ಸಮಸ್ತ ವ್ಯವಹಾರವನ್ನು, ಕರೋತಿ=ಮಾಡು ತ್ತಾನೆ. ಸ ಏವ=**ವಿಶ್ವಾಖ್ಯ**ನಾದ ಆ ಜೀವನೇ, ಜಾಗ್ರತ್ಪರಿತೃಪ್ತಿಂ ಏತಿ= ಜಾಗ್ರದವಸ್ಥೆಯಲ್ಲಿ ಸ್ಥೂಲೇಂದ್ರಿಯಾತ್ಮಕ ಆಚಾರಾದಿಲಿಂಗಗಳ ಮೂಲಕ ಪ್ರಸಾದರೂಪವಾದ ಸುಖಗಳನ್ನು ಅನುಭವಿಸಿ ತೃಪ್ತನಾಗುತ್ತಾನೆ. ತರುವಾಯ ಸ್ವಪ್ನೇ=ದೇಹೇಂದ್ರಿಯ ವ್ಯಾಪಾರಶೂನ್ಯವಾದ ಸ್ವಪ್ನಾವಸ್ಥೆ ಯಲ್ಲಿ, ಸಜೀವಃ=**ತೈಜಸ**ನೆಂಬ ಹೆಸರುಳ್ಳ **ಭೋಗಾಂಗ**ಸಂಜ್ಞಕನಾದ ಆ ಜೀವನು, ಸ್ವಮಾಯಯಾ ಜೀವಲೋಕೇ=ತನ್ನ ಸಂಕುಚಿತ ನಿಜಶಕ್ತಿ ಯಿಂದುಂಟಾದ ಈ ಜೀವಲೋಕದಲ್ಲಿ, ಸುಖದುಃಖ ಭೋಕ್ತಾ=ತಾನು ಎಚ್ಚರದಲ್ಲಿ ಮಾಡಿದ ಕರ್ಮವಾಸನಾನುಗುಣವಾಗಿ ಸೂಕ್ಷ್ಮೇಂದ್ರಿಯ ಗಳ ಮೂಲಕ ಸುಖದುಃಖಗಳನ್ನು ಅನುಭವಿಸುತ್ತಾನೆ. ಮುಂದೆ **ಪ್ರಾಜ್ಞ**ನೆಂಬ ಹೆಸರನ್ನು ತಳೆದ **ಯೋಗಾಂಗ**ನೆಂಬ ಆ ಜೀವನು ಸಕಲೇ ವಿಲೀನೇ=ಎಲ್ಲ ಇಂದ್ರಿಯವ್ಯಾಪಾರಗಳೂ ಅಡಗಿರುವ ತಮಸ್ಸಿ ನಿಂದ ಆವೃತವಾದ ಮಾಯಾರೂಪವಾದ ಸುಷುಪ್ತಿ ಅವಸ್ಥೆಯಲ್ಲಿ, ಸುಖ ರೂಪಂ=ಸುಖಸ್ವರೂಪವಾದ ನಿದ್ರಾನಂದವನ್ನು, ಏತಿ=ಅನುಭವಿಸು ತ್ತಾನೆ.

**ತಾತ್ಪರ್ಯ :**—ಶರೀರದಲ್ಲಿ ಆತ್ಮವು ಸೂಕ್ಷ್ಮರೂಪದಿಂದ ವಾಸಿಸು ತ್ತಿರುವುದು. ಹಾಗೂ ಅದು ಅವಸ್ಥಾಂತರಗಳನ್ನು ಹೊಂದುತ್ತಿರುವುದು. ಅದಕ್ಕೆ ಜೀವಾತ್ಮನೆಂದು ಹೆಸರು. ಅವನು ಹೊಂದುತ್ತಿರುವ ಅವಸ್ಥೆಗಳಿಗೆ **ಜಾಗ್ರತ್, ಸ್ವಪ್ನ** ಮತ್ತು **ಸುಷುಸ್ತಿ**ಯೆಂದು ಹೆಸರು. ಇವುಗಳಿಗೆ ಕ್ರಮವಾಗಿ **ವಿಶ್ವ, ತೈಜಸ** ಮತ್ತು **ಪ್ರಾಜ್ಞ**ವೆಂಬ ಮೂರು ಹೆಸರುಗಳಿವೆ ಯೆಂದು ಹಿಂದಿನ ಶ್ಲೋಕ ವ್ಯಾಖ್ಯಾನದಲ್ಲಿ ಸೂಚಿಸಲಾಗಿದೆ. ಜಾಗ್ರದವಸ್ಥೆ ಯಲ್ಲಿರುವಾಗ ಆತ್ಮನು ಸ್ಥೂಲಪಂಚಜ್ಞಾನೇಂದ್ರಿಯಗಳಿಗೆ ಗೋಚರ ವಾಗುವ ವಸ್ತುಗಳನ್ನು ಅನುಭವಿಸುವನು. ಇದನ್ನು ವೇದಾಂತದಲ್ಲಿ "**ಸಮಲಜಾಗ್ರದವಸ್ಥೆ**"ಯೆಂದು ಕರೆಯುವರು. ಅರ್ಥಾತ್ ಅದು ಬದ್ಧಜೀವನ ಸ್ಥಿತಿ. ಆದರೆ ವೀರಶೈವ ಪರಿಭಾಷೆಯಲ್ಲಿ **ಭಕ್ತನು** ವಿಷಯ

ಗಳನ್ನು ಇಂದ್ರಿಯಗಳ ಮೂಲಕ ಅನುಭವಿಸುವುದಿಲ್ಲ. ಕಣ್ಣು, ಕಿವಿ ಮುಂತಾದ ಇಂದ್ರಿಯಗಳಲ್ಲಿ ಶಿವಲಿಂಗಾದಿ ಪಂಚಲಿಂಗಗಳು ಸ್ಥಾಪಿತ ವಾಗಿರುವುದರಿಂದ ವಿಷಯಗಳು ಲಿಂಗಾರ್ಪಿತವಾಗಿ ಲಿಂಗಮುಖದಿಂದ ಪ್ರಸಾದರೂಪವಾಗಿ ಅನುಭವಿಸಲ್ಪಡುವುವು. **'ಇಷ್ಟಲಿಂಗಾರ್ಪಿತಂ ಶುದ್ಧಂ'** ಎಂದು ಅನುಭವಸೂತ್ರ ಮುಂತಾದ ಗ್ರಂಥಗಳಲ್ಲಿ ಉಕ್ತವಾಗಿದೆ. ಇಲ್ಲಿ ಹೇಳಿರುವ **ಜಾಗ್ರತ್ ಸ್ವಪ್ನ ಸುಷುಪ್ತಿ** ಅವಸ್ಥೆಗಳಲ್ಲಿರುವ ಜೀವನಿಗೆ **ವಿಶ್ವ ತೈಜಸ ಪ್ರಾಜ್ಞ** ಎಂಬ ಮೂರು ಹೆಸರುಗಳು ಕ್ರಮವಾಗಿ ಅನ್ವಯಿಸುತ್ತವೆ. ಇವುಗಳಿಗೆ ವೀರಶೈವ ಪರಿಭಾಷೆಯಲ್ಲಿ **ತ್ಯಾಗಾಂಗ, ಭೋಗಾಂಗ, ಯೋಗಾಂಗ** ಸಂಜ್ಞಕವಾದ ಜೀವನ ಅವಸ್ಥೆಗಳು ಉಕ್ತ ವಾಗಿವೆ. ವೇದಾಂತದಲ್ಲಿ ಇವುಗಳಿಗೆ **ಸ್ಥೂಲ, ಪ್ರವಿವಿಕ್ತ** ಮತ್ತು **ಆನಂದ** ಎಂಬ ಪರ್ಯಾಯ ನಾಮಗಳಿವೆ. ಶೈವಾಗಮಗಳಲ್ಲಿ ಇವನ್ನೇ **ರೂಪು, ರುಚಿ, ತೃಪ್ತಿ** ಎಂದು ಕರೆದಿದ್ದಾರೆ. ಆದುದರಿಂದ ಜೀವನು (ಭಕ್ತನು) ಸ್ವೀಕರಿಸುವ ವಿಷಯಗಳಲ್ಲಿ ಕ್ರಮವಾಗಿ **ರೂಪ**ವು ಇಷ್ಟಲಿಂಗಕ್ಕೆ ಸಮರ್ಪಿತವಾಗಿ **ಶುದ್ಧಪ್ರಸಾದ**ವೆನಿಸಲ್ಪಡುತ್ತದೆ. ಇದು **'ಅಮಲ ಜಾಗ್ರದವಸ್ಥೆ'.** ಮುಮುಕ್ಷುಜೀವನ ಸ್ಥಿತಿಯೆಂದರೂ ಸಲ್ಲುವುದು. ಈ ಅವಸ್ಥೆಯಲ್ಲಿ ಜೀವಾತ್ಮನು ಸ್ಥೂಲದೇಹಾಭಿಮಾನಿಯೂ, ಪಂಚಪ್ರಾಣ, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳ ಮೂಲಕ ತನ್ನ ವ್ಯಾಪಾರಗಳನ್ನು ಸಾಗಿಸುವವನೂ, **ಮನ, ಬುದ್ಧಿ, ಚಿತ್ತ, ಅಹಂಕಾರ** ಗಳೆಂಬ ತತ್ವಗಳಿಂದ ಕೂಡಿದವನೂ ಇರುವನು. ಇದು ಜೀವಾತ್ಮನ **ಮೊದಲನೆಯ ಅವಸ್ಥೆ.**

ಇನ್ನು ಜಾಗ್ರದವಸ್ಥೆಯನ್ನು ಬಿಟ್ಟು ಜೀವನು ಸ್ವಪ್ನಸ್ಥಿತಿಗೆ ಹೋದ ನೆಂದರೆ **ಭೋಗಾಂಗ** ಸಂಜ್ಞಕನಾದ (ತೈಜಸ) ಜೀವನೆನಿಸುವನು. ಈ ಸ್ಥಿತಿಯಲ್ಲಿ ಜೀವನ ಸ್ಥಿತಿಯು ತನ್ನ ಅವಯವಗಳನ್ನೆಲ್ಲ ಸಂಕೋಚ ಮಾಡಿಕೊಂಡಿರುವ ಆಮೆಯಂತೆ ಇರುತ್ತದೆ. ಈ ಸ್ಥಿತಿಯಲ್ಲಿ ಜೀವಾತ್ಮನು ಲಿಂಗಶರೀರದ ಅಂದರೆ ಸೂಕ್ಷ್ಮಶರೀರದ ಅಭಿಮಾನಿಯಿದ್ದು ಸೂಕ್ಷ್ಮೇಂದ್ರಿ ಯಗಳಿಂದ ತಾನು ಜಾಗ್ರದವಸ್ಥೆಯಲ್ಲಿ ಮಾಡಿದ ಕರ್ಮಗಳ ವಾಸನೆಗಳಿಗೆ ಅನುಸಾರವಾಗಿ ಉಪಭೋಗ ಪಡೆಯುವನು. ಆ ಸ್ಥಿತಿಯಲ್ಲಿ ಮನ,

ಬುದ್ಧಿ, ಚಿತ್ತ, ಅಹಂಕಾರಗಳು ಸೂಕ್ಷ್ಮ (ಪ್ರವಿವಿಕ್ತ) ರೂಪದಿಂದ ಆಯಾ ಉಪಭೋಗಮಾಡುವ ಕಾರ್ಯಕ್ಕೆ ಸಹಾಯಕವಾಗುವುವು. ಇಲ್ಲಿ ಅನುಭವಿಸುವ ವಿಷಯ ಸುಖಗಳು ಪ್ರಾಣಲಿಂಗಕ್ಕೆ ರುಚಿರೂಪದಲ್ಲಿ ಅರ್ಪಿತವಾಗಿ **ಸಿದ್ಧಪ್ರಸಾದ**ವೆನಿಸಲ್ಪಡುತ್ತವೆ. ಇದು ಜೀವನ **ಎರಡನೆಯ ಅವಸ್ಥೆ.**

ಈ ಸ್ಥಿತಿಯನ್ನು ದಾಟಿ ಜೀವಾತ್ಮನು ಸುಷುಪ್ತ್ಯಾವಸ್ಥೆಯನ್ನು ಸೇರಿದನೆಂದರೆ ಅವನು **ಪ್ರಾಜ್ಞ**ನೆಂಬ ಹೆಸರಿನಿಂದ ಕರೆಯಲ್ಪಡುವನು. ಇದನ್ನು **ಯೋಗಾಂಗ**ವೆಂದು ಕರೆಯುವರು. ಜೀವನ ಈ ಅವಸ್ಥೆಯನ್ನು ತನ್ನ ಮಕ್ಕಳನ್ನೆಲ್ಲ ತನ್ನಲ್ಲಿ ಅಡಗಿಸಿಕೊಂಡು ನಿದ್ರೆಯಲ್ಲಿರುವ ಕೋಳಿಗೆ ಹೋಲಿಸಿದ್ದಾರೆ. ಇಲ್ಲಿ ಅವನು ತಮಸ್ಸಿನಿಂದ ಅಭಿಭೂತನಾಗಿರುವುದರಿಂದ ಅವನಲ್ಲಿ ಬಾಹ್ಯವಿಷಯೋಪಭೋಗದ ಆಸೆಯು ಸಂಪೂರ್ಣವಾಗಿ ಲಯವಾಗಿ ಹೋಗಿರುವುದು. ಯಾವ ವಾಸನೆಗಳೂ ಚಿತ್ತದಲ್ಲಿರದಿರುವುದರಿಂದ ಈ ಸ್ಥಿತಿಯಲ್ಲಿರುವಾಗ ಜೀವಾತ್ಮರು ಕನಸುಗಳನ್ನು ಸಹ ಕಾಣುವುದಿಲ್ಲ. ವಸ್ತುಗಳನ್ನರಿತುಕೊಳ್ಳುವ ಶಕ್ತಿಯುಳ್ಳ ಪ್ರಜ್ಞಾನವು ನಿಶ್ಚಲವಾಗಿ ತನ್ನಲ್ಲಿ ತಾನೇ ರತವಾಗಿರುವುದರಿಂದ ಅದು ಘನವಾಗಿರುತ್ತದೆ. ಇದನ್ನೆ **ಚೈತನ್ಯಘನ** ಅಥವಾ **ಚಿದ್ಘನಸ್ಥಿತಿ**ಯೆಂದು ಹೇಳುತ್ತಾರೆ. ಈ ಸ್ಥಿತಿಯಲ್ಲಿ ಜೀವಾತ್ಮನು ಶುದ್ಧ ಚೈತನ್ಯದಿಂದ ಚಿತ್ಸುಖವನ್ನು ಅನುಭವಿಸುವನು. ಹೀಗೆ **ಯೋಗಾಂಗ** ಸಂಜ್ಞಕ (ಪ್ರಾಜ್ಞ)ನಾದ ಜೀವಾತ್ಮನು ಬಾಹ್ಯವ್ಯಾಪಾರರಹಿತನಾಗಿ ತನ್ನಲ್ಲಿ ತಾನೇ ಲೀನನಾಗಿರುವುದರಿಂದ ಅವನು ಅನುಭವಿಸುವ ವಿಷಯ ಸುಖಗಳು ಭಾವಲಿಂಗಾರ್ಪಿತವಾಗಿ ತೃಪ್ತಿಯೆನಿಸುತ್ತವೆ. ಇದೇ ಅವನ ನಿಜವಾದ ಆನಂದದ ಸ್ಥಿತಿ. ಇದು ಜೀವನ **ಮೂರನೆಯ ಅವಸ್ಥೆ**ಯೆನಿಸುವುದು.

ಹೀಗೆ "ಜಾಗ್ರತ್ ಸ್ವಪ್ನ ಸುಷುಪ್ತಿ ಅವಸ್ಥೆಗಳಲ್ಲಿ ಲಿಂಗಾರ್ಪಿತಮಾಡುದನ್ನೇ ಉಪಭೋಗಿಸುವುದರಿಂದ ಭಕ್ತನು ನಿರ್ಲಿಪ್ತನಾಗುತ್ತಾನೆ. ಅವನಿಗೆ ಪಾಪಭೀತಿಯಿಲ್ಲ. ಶಾಸ್ತ್ರ ಲೋಕಾಚಾರ ಮತ್ತು ಆತ್ಮಸಂತೋಷದಿಂದ ಪೂತವಾದುದನ್ನೇ ಲಿಂಗಾರ್ಪಿತಮಾಡಬೇಕಾಗಿರುವುದರಿಂದ ಅಪೇಯಪಾನ, ಅಭಕ್ಷ್ಯ ಭಕ್ಷಣಾದಿಗಳನ್ನು ಸಮರ್ಪಿಸಲಿಕ್ಕೆ ಬರು

ವುದಿಲ್ಲ. ಆದುದರಿಂದ ಶಿವಾನುಭಾವಿಗೆ ಪಾಪಸಂಪರ್ಕವೇ ಇಲ್ಲ. ತುಪ್ಪವು ಕೈಗೆ ಜಿಡ್ಡು ಮಾಡೀತೇ ಹೊರತು ನಾಲಗೆಗೆ ಅಂಟಾಗಲಾರದು. ವಿಷಯವು ವಿಷಯಾತ್ಮಕವಾಗಿರುವವರೆಗೂ ಅದು ವಿಷಯಸುಖವೆನಿಸುವುದು. ಲಿಂಗಾರ್ಪಿತವಾಯಿತೆಂದರೆ ಪ್ರಸಾದವೆನಿಸುವುದು. ಕಾಡಿಗೆಯು ಕಣ್ಣು ಸುತ್ತಲೂ ಇದ್ದರೂ ಸಹ ದೃಷ್ಟಿಗೆ ಲೇಪವಾಗಿರುವುದಿಲ್ಲ. ರೆಪ್ಪೆಗಳ ನಡುವೆ ಕಣ್ಣುಗುಡ್ಡೆ (ತಾರಕೆ) ಸುರಕ್ಷಿತವಾಗಿರುವಂತೆ ಲಿಂಗಭೋಗೋಪಭೋಗಿಯು ವಿಷಯಗಳನ್ನು ಆಚಾರಾದಿ ಲಿಂಗಗಳಲ್ಲಿ ಸಮರ್ಪಿಸಿ ಅವನೇ ತಾನೆಂಬ 'ದಾಸೋಽಹಂ' ಭಾವಪರನಾಗಿರುವುದೇ **'ದಾಸೋಽಹಂ'** ಭಾವವೆನ್ನುವರು.

**ರೂಪು, ರಸ, ಗಂಧ, ಶಬ್ದ, ಸ್ಪರ್ಶ** ಮತ್ತು **ರತಿ** ಕ್ರಿಯೆಗಳು ಕ್ರಮವಾಗಿ **ಶಿವ, ಗುರು, ಆಚಾರ, ಪ್ರಸಾದ, ಜಂಗಮ, ಮಹಾಲಿಂಗಗಳ** ಮೂಲಕವಾಗಿ ಅನುಭವಿಸಲ್ಪಟ್ಟ ಮೇಲೆ ಮತ್ತೆ ಉಳಿಯುವುದಿನ್ನೇನು? ಲಿಂಗಾರ್ಪಿತ ತತ್ತ್ವವನ್ನು ಬಲ್ಲವನು ಎಲ್ಲ ಭೋಗಗಳನ್ನು ಬ್ರಹ್ಮದೊಡನೆಯೇ ಅನುಭವಿಸುವನು. ಲಿಂಗದೇಹಿಯೂ, ಶಿವಾತ್ಮನೂ, ಲಿಂಗಾಚಾರನೂ ಆದವನು ಸರ್ವಲಿಂಗಮಯನಾದ್ದರಿಂದ ಇವನು ಲೌಕಿಕ ನರನಲ್ಲ. ಅವನು ಸೇವಿಸುವುದು ಕೇವಲ ಪ್ರಸಾದವೇ ಆದುದರಿಂದ ಅದು ತೃಪ್ತಿಯೇ ಆಗುತ್ತದೆ. ಈ ಅರ್ಪಣಜ್ಞಾನವು ಶಾಸ್ತ್ರಜ್ಞನಾದ ಗುರುವಿನ ಅನುಗ್ರಹದಿಂದ ಲಭ್ಯವಾಗುತ್ತದೆಯೇ ಹೊರತು ಕೇವಲ ಶಾಸ್ತ್ರಾಭ್ಯಾಸದಿಂದ ಲಭ್ಯವಾಗತಕ್ಕದ್ದಲ್ಲ'' ಎಂದು ಮುಂತಾಗಿ ಮಾಂಡೂಕ್ಯ, ಅನುಭವಸೂತ್ರ ಮುಂತಾದ ಗ್ರಂಥಗಳಲ್ಲಿ ವಿಸ್ತರಿಸಲ್ಪಟ್ಟಿದೆ. ॥ ೧೩ ॥

## ಮೂಲ

**ಪುನಶ್ಚ ಜನ್ಮಾಂತರಕರ್ಮಯೋಗಾತ್ಸ ಏವ ಜೀವಃ ಸ್ವಪಿತಿ ಪ್ರಬುದ್ಧಃ । ಪುರತ್ರಯೇ ಕ್ರೀಡತಿ ಯಶ್ಚ ಜೀವಸ್ತ ತಸ್ತು ಜಾತಂ ಸಕಲಂ ವಿಚಿತ್ರಮ್ । ಆಧಾರಮಾನಂದಮ ಖಂಡಬೋಧಂ ಯಸ್ಮಿನ್ ಲಯಂ ಯಾತಿ ಪುರತ್ರಯಂ ಚ**

**॥ ೧೪ ॥**

ಚೇತನಾಚೇತನಾತ್ಮಕ ಪ್ರಪಂಚಕ್ಕೆ ಸರ್ವಾಧಿಷ್ಠಾನಭೂತವಾದ ಪರಶಿವಾತ್ಮಕ ಸಹಜಲಿಂಗಸ್ವರೂಪವನ್ನು '**ಪುನಶ್ಚ**' ಎಂಬ ಮಂತ್ರದಲ್ಲಿ ಹೇಳುತ್ತಾನೆ.

**ಅರ್ಥ:**—ಪುನಶ್ಚ=ಹಿಂದೆ ಹೇಳಿದ ಮೂರು ಅವಸ್ಥೆಗಳನ್ನು ಹೊಂದಿದ ತರುವಾಯವೂ, ಸ ಏವ=ಪ್ರಾಜ್ಞಾಖ್ಯನಾದ ಆ ಜೀವನೇ, ಜನ್ಮಾಂತರ ಕರ್ಮಯೋಗಾತ್=ಬೇರೆ ಜನ್ಮದಲ್ಲಿ ಮಾಡಿದ ಕರ್ಮವಾಸನಾ ಸಂಬಂಧ ದಿಂದ, ಸ್ವಪಿತಿ=ನಿದ್ರಿಸುತ್ತಾನೆ, ತರುವಾಯ, ಪ್ರಬುದ್ಧಃ=ಎಚ್ಚರಗೊಂಡ ವನಾಗಿ, ಪುರತ್ರಯೇ=ಸ್ಥೂಲ ಸೂಕ್ಷ್ಮ ಕಾರಣರೂಪವಾದ ಮೂರು ಶರೀರಗಳಲ್ಲಿ, ಕ್ರೀಡತಿ=ವಿನೋದಪಡುತ್ತಾನೆ, ಯಶ್ಚ ಜೀವಸ್ತು=ಯಾವ ಜೀವನಾದರೋ, ತತಃ=ಸೃಷ್ಟಿಯಾದ ಮೇಲೆ, ಜಾತಂ=ಉದಿಸಿದ, ವಿಚಿತ್ರಂ=ನಾನಾ ರೂಪಾತ್ಮಕವಾದ್ದರಿಂದಲೇ ಆಶ್ಚರ್ಯಕರವಾದ, ಸಕಲಂ= ಚರಾಚರಾತ್ಮಕವಾದ ಜಗತ್ತು, ಚ=ಮತ್ತು, ಪುರತ್ರಯಂ= ಸ್ಥೂಲ ಸೂಕ್ಷ್ಮ ಕಾರಣಾತ್ಮಕವಾದ ತನುತ್ರಯವೂ ಸಹ, ಯಸ್ಮಿನ್= ಯಾವ ಪರಬ್ರಹ್ಮದಲ್ಲಿ, ಲಯಂ ಯಾತಿ=ವಿಲೀನವಾಗುತ್ತದೆಯೋ ಅಂತಹ, ಆಧಾರಂ=ನಿಖಿಲ ವಿಶ್ವಕ್ಕೆ ಆಧಾರಭೂತವಾದ, ಆನಂದಂ= ನಿತ್ಯಾನಂದರೂಪವಾದ, ಅಖಂಡಬೋಧಂ=ಪರಿಪೂರ್ಣಜ್ಞಾನಾತ್ಮಕವೆನಿಸಿ ರುವ ಪರಬ್ರಹ್ಮವನ್ನೇ, ಯಾತಿ=ಹೊಂದುತ್ತಾನೆ.

**ತಾತ್ಪರ್ಯ:**—ಹಿಂದೆ ಹೇಳಿದಂತೆ ದೇಹಿಗಳು ಜಾಗ್ರತ್ ಸ್ವಪ್ನ ಸುಷುಪ್ತಿ ಅವಸ್ಥೆಗಳಲ್ಲಿ ವಿಶ್ವ ತೈಜಸ ಪ್ರಾಜ್ಞತ್ವಾದಿ ಸಂಜ್ಞೆಗಳನ್ನು ಹೊಂದು ತ್ತಿದ್ದರೂ ಸಹ ತಮ್ಮ ತಮ್ಮ ಕರ್ಮಜ್ಞಾನಗಳಿಗನುಸರಿಸಿ ಸ್ವಪ್ನಪ್ರಬೋಧ

ಗಳನ್ನು ಪಡೆದು ಸ್ಥೂಲ ಸೂಕ್ಷ್ಮ ಕಾರಣಾತ್ಮಕವಾದ ಶರೀರಗಳಲ್ಲಿ ಪ್ರವೇಶಿಸುವರ್ಥವನ್ನು ಈ ಮಂತ್ರವು ಬೋಧಿಸುತ್ತದೆ. **'ಏತಸ್ಮಾತ್ ಜಾಯತೇ'** ಎಂಬ ಮುಂದಿನ ಮಂತ್ರದಲ್ಲಿ ಪ್ರಪಂಚೋತ್ಪತ್ತಿಯ ವಿಧಾನವನ್ನು ಹೇಳುವುದರಿಂದ ಅದಕ್ಕೆ ಪೂರ್ವಸ್ಥಿತಿಯಲ್ಲಿರುವ ಪರವಸ್ತುವಿನ ಸ್ಥಿತಿಯೇ ಇಲ್ಲಿ ಹೇಳಿರುವುದು. ಕಾಠಕಶ್ರುತಿಯು ಈ ಸ್ಥಿತಿಯನ್ನು ಚೆನ್ನಾಗಿ ವರ್ಣಿಸಿದೆ.

"ನಿದ್ರಿತರಾದವರಲ್ಲಿ ಎಚ್ಚರಿದ್ದು ನಾನಾ ಕಾಮನೆಗಳಿಗನುರೂಪವಾಗಿ ರೂಪಗಳನ್ನು ನಿರ್ಮಿಸುತ್ತಿರುವ ಪುರುಷನೇ ಪವಿತ್ರವಾದ ಬ್ರಹ್ಮವು. ಅದೇ ಅಮೃತವು. ಸರ್ವ ಲೋಕಗಳು ಅದರ ಆಶ್ರಯದಿಂದಲೇ ಇರುವುವು ಯಾರೂ ಅದರಾಚೆಗೆ ಹೋಗಲಾರರು. ಅದೇ ಇದು. ॥ ೮ ॥ ಒಂದು ಭವನವನ್ನು ಪ್ರವೇಶಿಸಿದ ಬೆಂಕಿಯು ಆಯಾ ವಸ್ತುಗಳಿಗನುರೂಪವಾದ (ಬೆಂಕಿ ಹತ್ತಿದಾಗ) ರೂಪಗಳನ್ನು ಧರಿಸುವಂತೆ ಎಲ್ಲ ಭೂತಗಳಲ್ಲಿರುವ ಒಬ್ಬನೆ ಆತ್ಮನು ನಾನಾ ರೂಪಗಳನ್ನು ಧರಿಸಿ ಆ ವಸ್ತುಗಳ ಹೊರಗೂ ವ್ಯಾಪಿಸಿರುವನು. ॥ ೯ ॥ ಒಂದು ಮನೆಯನ್ನು ಪ್ರವೇಶಿಸಿದ ಒಂದೇ ಗಾಳಿಯು ಆಯಾ ವಸ್ತುಗಳಿಗನುರೂಪವಾದ ರೂಪಗಳನ್ನು ಧರಿಸುವಂತೆ ಸರ್ವ ಭೂತಾಂತರಾತ್ಮನಾದ ಒಬ್ಬನೇ ಆತ್ಮನು ನಾನಾ ರೂಪಗಳನ್ನು ಧರಿಸಿ ಎಲ್ಲ ವಸ್ತುಗಳ ಹೊರಗೆ ವ್ಯಾಪಿಸಿರುವನು. ॥ ೧೦ ॥ ಸರ್ವ ಲೋಕದ ಕಣ್ಣಿನಂತಿರುವ ಸೂರ್ಯನು ಕಣ್ಣಿಗೆ ಕಾಣುವ ಬಾಹ್ಯ ದೋಷಗಳಿಂದ ನಿರ್ಲಿಪ್ತನಿರುವಂತೆ ಸರ್ವ ಭೂತಾಂತರಾತ್ಮನಾದ ಒಬ್ಬನೇ ಆತ್ಮನು ಲೋಕದ ದುಃಖಗಳಿಂದ ನಿರ್ಲಿಪ್ತನಿರುವನು. ಅವನು ನಿಮಿತ್ತ ಕಾರಣನಾದುದರಿಂದ ಲೋಕಬಾಹ್ಯನೂ ಆಗಿರುವನು. ॥ ೧೧ ॥ ಒಂದೇ ರೂಪವನ್ನು ನಾನಾ ರೂಪವಾಗಿ ಪ್ರಕಟಮಾಡುವ ಸರ್ವಭೂತಾಂತರಾತ್ಮನಾದ ಸರ್ವಸ್ವಾಮಿಯನ್ನು ಯಾವ ಜ್ಞಾನಿಗಳು ತಮ್ಮ ಆತ್ಮನಲ್ಲಿ ನೋಡುವರೋ ಅವರಿಗೆ ಅಕ್ಷಯ ಸುಖವು ದೊರಕುವುದು. ಇತರರಿಗೆ ಆ ಸುಖವು ದೊರೆಯಲಾರದು. ॥ ೧೨ ॥ (ಕಠ. ಅ. ೨. ವಲ್ಲಿ ೨. ೮-೧೨)

"ಸಮಸ್ತ ಭೂತಾತ್ಮಕವೂ, ವಿಚಿತ್ರವೂ ಅನೇಕ ರೂಪದಿಂದ ಉತ್ಪನ್ನವಾಗುವ ಸಮಸ್ತವೂ ಆ ರುದ್ರನೇ ಆಗಿದ್ದಾನೆ. (ತೈತ್ತಿರೀಯ

ಶ್ರುತಿ) ಎಂದು ಮುಂತಾಗಿ ಶ್ರುತಿಗಳು ಉದ್ಘೋಷಿಸುತ್ತವೆ. ಇದನ್ನೇ ವೀರಶೈವ ಸಿದ್ಧಾಂತದಲ್ಲಿ ಸ್ಥಲ, ಲಿಂಗ, ಶಬ್ದಗಳಿಂದ ನಿರ್ವಚನ ಮಾಡುತ್ತಾರೆ. ಜಗತ್ತು ಮತ್ತು ಪ್ರಾಕೃತ ಪೌರುಷವೂ ಸಹ ಮೊದಲು ಎಲ್ಲಿದ್ದಿತೋ ಮತ್ತೆ ಎಲ್ಲಿ ಲಯವಾಗುತ್ತದೆಯೋ ಅದೇ '**ಸ್ಥಲ**' ಅದೇ '**ಲಿಂಗ**' ಎಂದು ಅನುಭವಸೂತ್ರ ಮುಂತಾದ ಗ್ರಂಥಗಳಲ್ಲಿ ಸಿದ್ಧಾಂತ ಮಾಡಲಾಗಿದೆ. "**ಯಸ್ಮಾದಿದಂ ಜಗದಜಾಯತ ಯತ್ರ ತಿಷ್ಠತ್ಯಂತೇ ಸಮಸ್ತಮಿದಮಸ್ತಮುಪೈತಿ ಯತ್ರ**" ಎಂದು ಅನೇಕ ಪ್ರಮಾಣಗಳು ಇದನ್ನೇ ಸಮರ್ಥಿಸಿರುತ್ತವೆ.

ಇನ್ನು ಪ್ರಪಂಚೋತ್ಪತ್ತಿ ಕ್ರಮವನ್ನು ಹೇಳುತ್ತಾನೆ:—

## ಮೂಲ

**ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ । ಖಂ ವಾಯುರ್ಜ್ಯೋತಿರಾಪಶ್ಚ ಪೃಥ್ವೀ ವಿಶ್ವಸ್ಯ ಧಾರಿಣೀ ॥ ೧೫ ॥**

**ಅರ್ಥ:**—ಏತಸ್ಮಾತ್ = ಉಮಾಸಹಾಯಕವಾದ (ಶಕ್ತಿವಿಶಿಷ್ಟವಾದ) ಈ ಪರಶಿವಬ್ರಹ್ಮದ ದೆಸೆಯಿಂದ, ಪ್ರಾಣಃ=ಸರ್ವ ಪ್ರಾಣಿಗಳ ಅಂತರ್ವೃತ್ತಿಯಾದ ಪ್ರಾಣಾನಿಲವು, ಮನಃ=ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸು, ಸರ್ವೇಂದ್ರಿಯಾಣಿ=ಕಿವಿ, ಚರ್ಮ, ಕಣ್ಣು, ನಾಲಗೆ, ಮೂಗು ಎಂಬ ಪಂಚಜ್ಞಾನೇಂದ್ರಿಯಗಳೂ, ಮಾತು, ಕೈ, ಕಾಲು, ಪಾಯು, ಉಪಸ್ಥ ಎಂಬೈದು ಕರ್ಮೇಂದ್ರಿಯಗಳೂ, ಖಂ=ಬಯಲು, ವಾಯು=ಗಾಳಿ, ಜ್ಯೋತಿ=ಬೆಂಕಿ, ಆಪಃ=ನೀರು, ವಿಶ್ವಸ್ಯ ಧಾರಿಣೀ ಪೃಥ್ವೀ=ವಿಶ್ವಂಭರಿಯಾದ ಪೃಥ್ವೀ ಮತ್ತು ಅವುಗಳ ಗುಣಗಳೆನಿಸಿದ ಶಬ್ದ, ಸ್ಪರ್ಶ, ರೂಪ, ರಸ, ಗಂಧಾತ್ಮಕ ಪಂಚತನ್ಮಾತ್ರಗಳೂ, ಜಾಯತೇ=ಜನಿಸುತ್ತವೆ.

**ತಾತ್ಪರ್ಯ:**—ಕೈವಲ್ಯ ಶ್ರುತಿಯು '**ಉಮಾಸಹಾಯಂ ಪರಮೇಶ್ವರಂ**' ಎಂಬ ಮಂತ್ರದಲ್ಲಿ ಶಕ್ತಿವಿಶಿಷ್ಟ ಪರಬ್ರಹ್ಮವನ್ನು ನಿರ್ವಚನ

ಮಾಡಿರುವುದರಿಂದ ಜಗತ್ ಸೃಷ್ಟಿಸೂಚಕವಾದ ಈ ಮಂತ್ರದಲ್ಲಿಯೂ ಸಹ ಆ ವಸ್ತುವಿಗೆ ಉಮಾಸಹಾಯಕತ್ವವನ್ನು ಅವಶ್ಯ ಅಂಗೀಕರಿಸಲೇ ಬೇಕಾಗಿರುವುದರಿಂದ '**ಏತಸ್ಮಾತ್**' ಎಂಬುದಕ್ಕೆ ಶಕ್ತಿವಿಶಿಷ್ಟ ಪರಬ್ರಹ್ಮ ವೆಂದು ಅನನ್ಯಗತಿಯಿಂದ ಅರ್ಥಮಾಡಲಾಗಿದೆ. ಅಂದಮೇಲೆ ಪ್ರವೃತ್ತಿ ಮಾರ್ಗದಲ್ಲಿ '**ಏಕಮೇವಾದ್ವಿತೀಯಂ ಬ್ರಹ್ಮ**' '**ಸತ್ಯಂ ಜ್ಞಾನ ಮನಂತಂ ಬ್ರಹ**' '**ಸರ್ವಂ ಖಲ್ವಿದಂ ಬ್ರಹ್ಮ**' ಮುಂತಾದ ಶ್ರುತಿ ಗಳಿಂದ ಅದ್ವಿತೀಯವೂ, ಸಚ್ಚಿದಾನಂದ ಸ್ವರೂಪವೂ, ಸಕಲ ಚರಾಚರ ಪ್ರಪಂಚಸ್ವರೂಪವೂ ಆದ ಪರಶಿವಬ್ರಹ್ಮದಲ್ಲಿ ಅವಿನಾಭಾವ ಸಂಬಂಧ ದಿಂದ ಇರುವ ವಿಮರ್ಶಶಕ್ತಿಯ ಸ್ಫುರಣದಿಂದ ಶಿವಾದಿ ಪೃಥಿವಿಯವರೆಗಿನ ಮುವತ್ತಾರು ತತ್ತ್ವಾತ್ಮಕವಾದ ಜಗತ್ತು ಉದಿಸಿತೆಂದು ತಿಳಿಯಬೇಕಾಗಿದೆ.

ಜಗತ್ ಸೃಷ್ಟಿಯ ಕ್ರಮವು ಈ ರೀತಿಯಿದೆ:—'**ಬಹು ಸ್ಯಾಂ ಪ್ರಜಾಯೇಯ**' ಎಂಬ ಛಾಂದೋಗ್ಯ ಶ್ರುತಿಯ ಪ್ರಮಾಣಾನುಸಾರ ವಾಗಿ ಪ್ರಣವಪರ್ಯಾಯವಾದ (೬-೨-೩) ಉಮಾಸಹಾಯಕವಾದ ಬ್ರಹ್ಮವು ಸೃಷ್ಟಿಗೆ ಉನ್ಮುಖವಾಯಿತು. ಆಗ ಆ ಬ್ರಹ್ಮದಲ್ಲಿನ ವಿಮರ್ಶ ಶಕ್ತಿಯು ಇಚ್ಛಾಶಕ್ತಿಯಾಗಿ ಪರಿಣಮಿಸಿತು.

> 'ಅನಾದಿ ನಿಧನಾಚ್ಛಾಂತಾಚ್ಛಿವಾತ್ ಪರಮಕಾರಣಾತ್ ।
> ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ॥
> ತತೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥

ಎಂಬ ಆಗಮ ಪ್ರಮಾಣವನ್ನು ಅನುಸರಿಸಿ ಆ ಪರಶಿವ ಬ್ರಹ್ಮದ ದೆಸೆ ಯಿಂದಲೇ ಇಚ್ಛಾಶಕ್ತಿಯೂ, ಅದರಿಂದ ಜ್ಞಾನಶಕ್ತಿಯೂ, ಕ್ರಿಯಾ ಶಕ್ತಿಯೂ ಆವಿರ್ಭವಿಸಿದವು. ಆ ಇಚ್ಛಾಶಕ್ತಿಗೆ ಜ್ಞಾನಶಕ್ತಿಯು ಅಂತರಂಗ ವಾಗಿಯೂ, ಕ್ರಿಯಾಶಕ್ತಿಯು ಬಹಿರಂಗವಾಗಿಯೂ ಇರುವುವು. ಪರಶಿವಬ್ರಹ್ಮವು ಜ್ಞಾನಶಕ್ತಿಯಲ್ಲಿ ಸ್ಫುರಿಸಿ '**ನಾನು ಸರ್ವಜ್ಞನು**' ಎಂಬ ಅಭಿಮಾನವನ್ನು ಪಡೆಯಲು '**ಶಿವತತ್ತ್ವ**' ವೆನಿಸಿಕೊಳ್ಳುವುದು. ಜೇಡರಹುಳುವು ಜಾಲಕ್ಕೆ ನಿಮಿತ್ತಕಾರಣವಾಗುವಂತೆ, ಈ ಶಿವಾತ್ಮಕ ವಾದ ಪರಶಿವ ಬ್ರಹ್ಮವೇ ಜ್ಞಾನವಿಶಿಷ್ಟತ್ವಾಕಾರದಿಂದ ಭಾವೀ ಪ್ರಪಂಚಕ್ಕೆ ನಿಮಿತ್ತ ಕಾರಣವಾಗುವುದು.

ಪರಶಿವ ತತ್ತ್ವವು ಕ್ರಿಯಾಶಕ್ತಿಯಲ್ಲಿ ಸ್ಫುರಿಸಿ '**ನಾನು ಸರ್ವ ಕರ್ತೃವು**' ಎಂಬ ಅಭಿಮಾನವನ್ನು ಪಡೆಯಲು '**ಶಕ್ತಿತತ್ತ್ವ**'ವೆನಿಸಿ ಕೊಳ್ಳುವುದು. ಜೇಡರಹುಳುವು ಜಾಲೋತ್ಪತ್ತಿಗೆ ಯೋಗ್ಯ ಶರೀರ ವಿಶೇಷವನ್ನು ತಳೆದಿರುವುದರಿಂದ ಅದು ಆ ಜಾಲಕ್ಕೆ ಉಪಾದಾನ ಕಾರಣವೂ ಆಗಿರುವಂತೆ ಈ ಶಕ್ತಿತತ್ತ್ವಾತ್ಮಕವಾದ ಪರಶಿವ ಬ್ರಹ್ಮವೇ ಕ್ರಿಯಾವಿಶಿಷ್ಟತ್ವಾಕಾರದಿಂದ ಮುಂದಿನ ಪ್ರಪಂಚಕ್ಕೆ ಉಪಾದಾನ ಕಾರಣವೂ ಆಗುತ್ತದೆ.

ಪರಶಿವ ಬ್ರಹ್ಮವು ಪ್ರಪಂಚಕ್ಕೆ ಅಭಿನ್ನ ನಿಮಿತ್ತೋಪಾದಾನಕಾರಣ ವಾಗುವುದೆಂಬುದನ್ನು '**ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ**' (ಮುಂಡಕ ೧-೧-೭) ಎಂದು ಶ್ರುತಿಯು ಹೇಳುತ್ತದೆ.

ಈ ಶಕ್ತಿತತ್ತ್ವವು ಇಚ್ಛಾಶಕ್ತಿಗೆ ಅಂತರಂಗವಾದ ಜ್ಞಾನಶಕ್ತಿಯಲ್ಲಿ ಪ್ರವೇಶಿಸಿ ನೆನೆದು ಉಬ್ಬಿದ ಕಡಲೆಯಂತೆ, ಅಂಕುರಾಯಮಾಣವಾದ ಪ್ರಪಂಚವನ್ನು ಕುರಿತು '**ನಾನು ಈ ಪ್ರಪಂಚವು**' ಎಂದು ಅಭಿಮಾನ ವನ್ನು ಪಡೆಯಲು '**ಸದಾಶಿವತತ್ತ್ವ**'ವೆನಿಸಿಕೊಳ್ಳುವುದು.

ಈ ಸದಾಶಿವತತ್ತ್ವವು ಇಚ್ಛಾಶಕ್ತಿಗೆ ಬಹಿರಂಗವಾದ ಕ್ರಿಯಾಶಕ್ತಿ ಯಲ್ಲಿ ಸ್ಫುರಿಸಿ ಒಳ್ಳೆ ನೆಲದಲ್ಲಿ ಬಿತ್ತಿದ ಬೀಜದಂತೆ ಅಂಕುರಿತವಾದ ಪ್ರಪಂಚವನ್ನು ಕುರಿತು '**ಅಹಮಿದಂ**' ನಾನು ಈ ಪ್ರಪಂಚವು ಎಂಬ ಅಭಿಮಾನ ಪಡೆಯಲು '**ಈಶ್ವರತತ್ತ್ವ**'ವೆನಿಸುವುದು.

ಈಶ್ವರತತ್ತ್ವವೇ ಸಾಗರತರಂಗನ್ಯಾಯದಂತೆ '**ಅಹಮಿದಂ**' ನಾನು ಈ ಪ್ರಪಂಚವು ಎಂದರೆ '**ನಾನು**' ಎಂಬುದಕ್ಕೂ '**ಪ್ರಪಂಚ**' ಎಂಬುದಕ್ಕೂ ಅಭೇದ ಜ್ಞಾನವನ್ನು ಪಡೆಯಲು '**ಶುದ್ಧವಿದ್ಯಾತತ್ತ್ವ**' ವೆನಿಸಿಕೊಳ್ಳುವುದು.

ಈ ಶುದ್ಧವಿದ್ಯಾತತ್ತ್ವವೇ ಮಯೂರಾಂಡರಸನ್ಯಾಯದಂತೆ ತನ್ನಲ್ಲಿ ಅಡಗಿರುವ ಭಾವೀ ಪ್ರಪಂಚ ನಿರ್ಮಾಣಕಾರಣವಾದ ಭೂತಸೂಕ್ಷ್ಮ ಪದಾರ್ಥಗಳಲ್ಲಿ ಅನ್ಯೋನ್ಯಾಭಾವರೂಪ ಭೇದ ಬುದ್ಧಿಯನ್ನು ತಳೆದು '**ಮಾಯಾತತ್ತ್ವ**'ವೆನಿಸಿಕೊಳ್ಳುವುದು.

**ಕಲಾ–ವಿದ್ಯಾ–ರಾಗ–ಕಾಲ–ನಿಯತಿಗಳೆಂಬ** ಐದು ತತ್ತ್ವಗಳು ಪುರುಷನಿಗೆ ಕಂಚುಕರೂಪವಾಗಿರುವುದರಿಂದ '**ಪುರುಷತತ್ತ್ವ**'ವನ್ನು ಮೊದಲು ನಿರೂಪಿಸಲಾಗುತ್ತದೆ. ಕಾಷ್ಠದಿಂದ ಅಗ್ನಿಕಣಗಳು ಆವಿರ್ಭವಿಸುವಂತೆ, ಪರಶಿವನ ಇಚ್ಛಾಶಕ್ತಿಯ ಯೋಗದಿಂದ ಆವಿರ್ಭವಿಸುವ ಶಿವಾಂಶವೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ '**ಪುರುಷತತ್ತ್ವ**'ವೆನಿಸಿಕೊಳ್ಳುವುದು. ಈ ಪುರುಷತತ್ತ್ವಕ್ಕೆ **ಮಾಯಾಮಲ** ಸಂಬಂಧವಿರುವುದರಿಂದ ಆತ್ಮನಲ್ಲಿ ಅನಾತ್ಮತ್ವಜ್ಞಾನವೂ, ಅನಾತ್ಮವಸ್ತುಗಳಲ್ಲಿ ಆತ್ಮತ್ವಜ್ಞಾನವೂ 'ನಾನು ಸುಖಿ' 'ನಾನು ದುಃಖಿ' ಎಂಬ ಬುದ್ಧಿಯು ಉತ್ಪನ್ನವಾಗುವುದು. ಹೀಗೆ ಪುರುಷನು ಆಣವಾದಿ ಮಲವಿಶಿಷ್ಟನಾದ್ದರಿಂದ ಸಂಸಾರಿಯೆನಿಸುವನು. '**ಮಲಾವೃತಸ್ಸಂಸಾರೀ**' ಎಂಬ ಶಿವಸೂತ್ರವು ಇದನ್ನೇ ಹೇಳುವುದು.

ಮಾಯಾಮಲಾವೃತನಾದ್ದರಿಂದ ಪುರುಷನು ತನ್ನ ಸರ್ವಕರ್ತೃತ್ವ–ಸರ್ವಜ್ಞತ್ವ–ಪರಿಪೂರ್ಣತ್ವ–ನಿತ್ಯತ್ವಸ್ವತ್ವ ಮತ್ತು ವ್ಯಾಪಕತ್ವಗಳನ್ನು ಕಳೆದುಕೊಂಡು ಕಿಂಚಿತ್ಕರ್ತೃತ್ವಾದಿಗಳಿಂದ ಕೂಡುವನು. ಪುರುಷನ ಈ ಕಿಂಚಿತ್‌ಕರ್ತೃತ್ವ ರೂಪಶಕ್ತಿಯೇ '**ಕಲಾತತ್ತ್ವ**'. ಕಿಂಚಿಜ್ಞತ್ವ ರೂಪಶಕ್ತಿಯೇ '**ವಿದ್ಯಾತತ್ತ್ವ**'. ಅಪೂರ್ಣತ್ವ ರೂಪಶಕ್ತಿಯೇ ಸ್ರಕ್ಚಂದನವನಿತಾದಿಗಳಲ್ಲಿನ ಪ್ರೀತಿರೂಪವಾದ '**ರಾಗತತ್ತ್ವ**'. ಅನಿತ್ಯರೂಪಶಕ್ತಿಯೇ, ಭೂತ ಭವಿಷ್ಯದ್ವರ್ತಮಾನಗಳ ವ್ಯವಹಾರ ಯೋಗ್ಯವಾದ '**ಕಾಲತತ್ತ್ವ**'. ಅವ್ಯಾಪಕತ್ವ ರೂಪಶಕ್ತಿಯೇ, ಇಂಥ ಕಾರಣದಿಂದ ಈ ಕಾರ್ಯವೇ ಹುಟ್ಟುವುದು; ಮತ್ತೊಂದು ಹುಟ್ಟುವುದಿಲ್ಲವೆಂಬ ನಿಯಮಕ್ಕೆ ಕಾರಣವಾದ '**ನಿಯತಿತತ್ತ್ವ**'ವೆನಿಸಿಕೊಳ್ಳುವುದು.

ಹೀಗೆ ಕಾರ್ಯೌನ್ಮುಖ್ಯ ಗರ್ಭಿತವಾದ ಇಚ್ಛಾಶಕ್ತಿಯು, ಸ್ವಗತವಾದ ಜ್ಞಾನಶಕ್ತಿ, ಕ್ರಿಯಾಶಕ್ತಿಗಳಲ್ಲಿರುವ '**ಜ್ಞಾನಂ ಕ್ರಿಯಾ ನ ಭವತಿ, ಕ್ರಿಯಾ ಜ್ಞಾನಂ ನ ಭವತಿ**' ಎಂಬ ಅನ್ಯೋನ್ಯಾಭಾವರೂಪ ಭೇದಬುದ್ಧಿ ಪ್ರಧಾನವಾದ ಮಾಯಾತತ್ತ್ವದಲ್ಲಿ ಪ್ರತಿಸ್ಫುರಿಸಲು '**ಪ್ರಕೃತಿತತ್ತ್ವ**'ವೆನಿಸುವುದು. ಈ ಪ್ರಕೃತಿತತ್ತ್ವವು ಸುಖದುಃಖ ಮೋಹಗಳಿಗೆ ಕಾರಣಗಳಾದ ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥಾರೂಪವಾಗಿದ್ದು,

ಮಹತ್ತತ್ತ್ವವೇ ಮೊದಲಾಗಿ ಪೃಥಿವ್ಯಂತವಾದ ೨೩ ತತ್ತ್ವಗಳಿಗೆ ಮೂಲ ಕಾರಣವಾಗಿರುವುದು.

ಪ್ರಕೃತಿ ತತ್ತ್ವರೂಪವಾದ ಈ ಶಕ್ತಿತತ್ತ್ವವೇ 'ಇದಮಿತ್ಥಂ' 'ಇದು ಹೀಗೆಯೇ ಸರಿ' ಎಂಬ ನಿಶ್ಚಯಕ್ಕೆ ಕಾರಣವಾದುದಾಗಿ "**ಬುದ್ಧಿ ತತ್ತ್ವ**" (ಮಹತತ್ತ್ವ)ವೆಂದೂ, ಬುದ್ಧಿತತ್ತ್ವ ರೂಪಶಕ್ತಿತತ್ತ್ವವೇ 'ನಾನು–ನನ್ನದು' ಎಂಬ ಅಹಂಕಾರ–ಮಮಕಾರಗಳಿಗೆ ಕಾರಣವಾಗಿ '**ಅಹಂಕಾರತತ್ತ್ವ**'ವೆಂದೂ, ಅಹಂಕಾರತತ್ತ್ವ ರೂಪವಾದ ಶಕ್ತಿತತ್ತ್ವವೇ ಸಂಕಲ್ಪ ವಿಕಲ್ಪಗಳಿಗೆ ಕಾರಣವಾದ '**ಮನಸ್ತತ್ತ್ವ**'ವೆಂದೂ ಎನಿಸಿಕೊಳ್ಳು ವುದು. ಬುದ್ಧಿ, ಅಹಂಕಾರ ಮನಸ್ತತ್ತ್ವಗಳು ಶರೀರದೊಳಗಿರುವುದ ರಿಂದ ಈ ಮೂರೂ "**ಅಂತಃಕರಣ**"ವೆನಿಸುವುವು. ಇದು ಇಚ್ಛಾಶಕ್ತಿ ಪ್ರಧಾನವಾದುದು.

ಅಂತಃಕರಣರೂಪವಾಗಿ ಪರಿಣಮಿಸಿದ ಈ ಶಕ್ತಿತತ್ತ್ವವೇ ಬಾಹ್ಯ ಶರೀರವನ್ನು ಅವಲಂಬಿಸಿ ಶಬ್ದಜ್ಞಾನಕ್ಕೆ ಸಾಧನವಾಗಿ '**ಶ್ರೋತ್ರತತ್ತ್ವ**' ವೆಂದೂ, ಸ್ಪರ್ಶಜ್ಞಾನಕ್ಕೆ ಸಾಧನವಾಗಿ '**ತ್ವಕ್ ತತ್ತ್ವ**' ಎಂದೂ, ರೂಪ ಜ್ಞಾನಕ್ಕೆ ಸಾಧನವಾಗಿ '**ನೇತ್ರತತ್ತ್ವ**'ವೆಂದೂ, ರಸಜ್ಞಾನಕ್ಕೆ ಸಾಧನ ವಾಗಿ '**ಜಿಹ್ವಾತತ್ತ್ವ**'ವೆಂದೂ, ಗಂಧಜ್ಞಾನಕ್ಕೆ ಸಾಧನವಾಗಿ '**ಘ್ರಾಣ ತತ್ತ್ವ**' ವೆಂದೂ ಹೇಳಿಸಿಕೊಂಡಿತು. ಈ ಐದು ಇಂದ್ರಿಯಗಳೂ ಜ್ಞಾನ ಶಕ್ತಿಪ್ರಧಾನವಾದವುಗಳಾದುದರಿಂದ ಜ್ಞಾನೇಂದ್ರಿಯಗಳಾದವು.

ಜ್ಞಾನೇಂದ್ರಿಯ ರೂಪವಾದ ಶಕ್ತಿತತ್ತ್ವವೇ ಉಚ್ಚಾರಣ ಕ್ರಿಯೆಗೆ ಸಾಧನವಾಗಿ '**ವಾಕ್ತತ್ತ್ವ**'ವೆಂದೂ, ದಾನಾದಾನಾದಿ ಕ್ರಿಯೆಗಳಿಗೆ ಸಾಧನವಾಗಿ '**ಪಾಣಿತತ್ತ್ವ**'ವೆಂದೂ, ಗಮನಾಗಮನಾದಿ ಕ್ರಿಯೆಗಳಿಗೆ ಸಾಧನವಾಗಿ '**ಪಾದತತ್ತ್ವ**'ವೆಂದೂ, ಮಲಪರಿತ್ಯಾಗಕ್ಕೆ ಸಾಧನವಾಗಿ '**ಪಾಯುತತ್ತ್ವ**'ವೆಂದೂ, ರೇತೋಮೂತ್ರ ಪರಿತ್ಯಾಗಕ್ಕೆ ಸಾಧನವಾಗಿ '**ಉಪಸ್ಥಾತತ್ತ್ವ**'ವೆಂದೂ ಕರೆಯಿಸಿಕೊಂಡಿದೆ. ಈ ಐದು ಇಂದ್ರಿಯಗಳೂ ಕ್ರಿಯಾಶಕ್ತಿ ಪ್ರಧಾನವಾದವುಗಳಾದ್ದರಿಂದ ಕರ್ಮೇಂದ್ರಿಯಗಳಾದುವು. ಮೇಲೆ ಹೇಳಿದ ಬುದ್ಧಿತತ್ತ್ವದಿಂದ ಹಿಡಿದು ಇಲ್ಲಿಯವರೆಗಿನ ಹದಿಮೂರು ತತ್ತ್ವಗಳು **ಇಚ್ಛಾ–ಜ್ಞಾನ–ಕ್ರಿಯಾಶಕ್ತಿ** ಪ್ರಧಾನಗಳಾಗಿರುವುವು.

ಈ ಶಕ್ತಿತತ್ತ್ವವೇ, ಕೇವಲ ಶ್ರೋತ್ರೇಂದ್ರಿಯ ಗ್ರಾಹ್ಯವಾಗಿ "**ಶಬ್ದತತ್ತ್ವ**"ವಾಗಿಯೂ, ಕೇವಲ ತ್ವಗಿಂದ್ರಿಯಗ್ರಾಹ್ಯವಾಗಿ "**ಸ್ಪರ್ಶತತ್ತ್ವ**"ವಾಗಿಯೂ, ಕೇವಲ ನೇತ್ರೇಂದ್ರಿಯಗ್ರಾಹ್ಯವಾಗಿ "**ರೂಪತತ್ತ್ವ**"ವಾಗಿಯೂ, ಕೇವಲ ಜಿಹ್ವೇಂದ್ರಿಯಗ್ರಾಹ್ಯವಾಗಿ "**ರಸತತ್ತ್ವ**"ವಾಗಿಯೂ, ಕೇವಲ ಘ್ರಾಣೇಂದ್ರಿಯಗ್ರಾಹ್ಯವಾಗಿ "**ಗಂಧತತ್ತ್ವ**"ವಾಗಿಯೂ ಪರಿಣಮಿಸಿದೆ. ಶಬ್ದದಲ್ಲಿ ಧ್ವನ್ಯಾತ್ಮಕ ವರ್ಣಾತ್ಮಕವೆಂದೂ, ಸ್ಪರ್ಶದಲ್ಲಿ ಶೀತೋಷ್ಣಸ್ಪರ್ಶವೆಂದೂ, ರೂಪದಲ್ಲಿ ನೀಲಪೀತಾದಿ ರೂಪವೆಂದೂ, ರಸದಲ್ಲಿ ಮಧುರಾವ್ಲಾದಿ ರಸವೆಂದೂ, ಗಂಧದಲ್ಲಿ ಸುಗಂಧ—ದುರ್ಗಂಧವೆಂದೂ ವಿಭಾಗವು ವ್ಯಕ್ತವಾಗದಿರುವುದರಿಂದ ಶಬ್ದಾದಿಗಳು '**ತನ್ಮಾತ್ರ**' ಗಳೆಂದು ಹೇಳಿಸಿಕೊಳ್ಳುವುವು.

ಹಿಂದೆ ಹೇಳಿದ ಈ ಶಕ್ತಿತತ್ತ್ವವೇ ಶಬ್ದೈಕಗುಣವುಳ್ಳ "**ಆಕಾಶ ತತ್ತ್ವ**" ರೂಪವಾಗಿಯೂ, ಸ್ಪರ್ಶವೆಂಬ ಪ್ರಧಾನ ಗುಣವುಳ್ಳ "**ವಾಯುತತ್ತ್ವ**" ರೂಪವಾಗಿಯೂ, ರೂಪವೆಂಬ ಪ್ರಧಾನ ಗುಣವುಳ್ಳ "**ತೇಜಸ್ತತ್ತ್ವ**" ರೂಪವಾಗಿಯೂ, ರಸವೆಂಬ ಪ್ರಧಾನ ಗುಣವುಳ್ಳ "**ಜಲತತ್ತ್ವ**" ರೂಪವಾಗಿಯೂ, ಗಂಧವೆಂಬ ಪ್ರಧಾನ ಗುಣವುಳ್ಳ, "**ಪೃಥಿವೀ ತತ್ತ್ವ**" ರೂಪವಾಗಿಯೂ ಪರಿಣಮಿಸುವುದು.

ಈ ಪಂಚಭೂತಗಳಲ್ಲಿ ಉತ್ತರೋತ್ತರ ಭೂತಗಳಲ್ಲಿ ಪೂರ್ವ ಪೂರ್ವ ಭೂತಗಳ ಗುಣಗಳು ಅನುವರ್ತಿಸುವುವು. ನಿಗಮಾಗಮ ಪ್ರಸಿದ್ಧವಾದ ಈ ಮುವತ್ತಾರು ತತ್ತ್ವಗಳು ಈ ಮಂತ್ರದಲ್ಲಿ ಬಹು ಸಂಕ್ಷೇಪವಾಗಿ ಉಕ್ತವಾಗಿವೆ. ಇದೇ ಅರ್ಥವು '**ಬ್ರಾಹ್ಮಣೋಽಸ್ಯ ಮುಖಮಾಸೀತ್**' ಮುಂತಾದ ಶ್ರುತಿಗಳಲ್ಲಿಯೂ ಹೇಳಿದೆ. ಈ ರೀತಿಯಾದ ತತ್ತ್ವೋತ್ಪತ್ತಿಯ ಕ್ರಮವು (ಸಂಕ್ಷಿಪ್ತವಾಗಿ) ಸಿದ್ಧಾಂತ ಶಿಖಾಮಣಿಯಲ್ಲಿ '**ಯಸ್ಯೋರ್ಮಿ ಬುದ್ಬುದಾಭಾಸಃ ಷಟ್‌ತ್ರಿಂಶತ್ತತ್ತ್ವ ಸಂಚಯಃ**' ಎಂಬ ಮಂಗಲಾಚರಣೆಯ ಪದ್ಯದಲ್ಲಿಯೇ ನಿರೂಪಿತವಾಗಿದೆ. ಹೀಗೆ ಶಿವಾದಿ ಪೃಥಿವ್ಯಂತವಾದ ಈ ಜಗತ್ತು ಸಚ್ಚಿದಾನಂದ ರೂಪವಾದ ಶಕ್ತಿ ವಿಶಿಷ್ಟ ಪರಶಿವ ಬ್ರಹ್ಮದ ಪರಿಣಾಮ ರೂಪವಾಗಿರುವುದರಿಂದ, ವೀರಶೈವ ಮತವು ಪರಿಣಾಮವಾದವನ್ನೂ ಜಗತ್ಸತ್ಯತ್ವ ವಾದವನ್ನೂ ಬೋಧಿಸುತ್ತದೆ.

ಇದಕ್ಕೆ ಸಾಧಕವಾಗಿ ಈ ಸಿದ್ಧಾಂತವು **ಪ್ರತ್ಯಕ್ಷ-ಅನುಮಾನ-ಶಬ್ದ** ಗಳೆಂಬ ಮೂರು ಪ್ರಮಾಣಗಳನ್ನು ಅಂಗೀಕರಿಸಿದೆ. ಆದರೆ ಮಿಕ್ಕ ದಾರ್ಶನಿಕರು ಇನ್ನೂ ಬೇರೆ ಬೇರೆ ಪ್ರಮಾಣಗಳನ್ನು ಅಂಗೀಕರಿಸಿರುವರು.

**ಚಾರ್ವಾಕರು** ಪ್ರತ್ಯಕ್ಷವೆಂಬ ಒಂದೇ ಪ್ರಮಾಣವನ್ನೂ, **ವೈಶೇಷಿಕರು** ಮತ್ತು **ಬೌದ್ಧರು** ಪ್ರತ್ಯಕ್ಷ-ಅನುಮಾನಗಳೆಂಬ ಎರಡು ಪ್ರಮಾಣಗಳನ್ನೂ, ಸಾಂಖ್ಯರು ಪ್ರತ್ಯಕ್ಷ-ಅನುಮಾನ-ಶಬ್ದಗಳೆಂಬ ಮೂರು ಪ್ರಮಾಣಗಳನ್ನೂ, **ಉದಯನಾಚಾರ್ಯಾದಿ ನೈಯಾಯಿಕರು** ಈ ಮೂರರ ಜೊತೆಗೆ ಉಪಮಾನವನ್ನೂ ಸೇರಿಸಿ ನಾಲ್ಕು ಪ್ರಮಾಣಗಳನ್ನೂ, **ಪ್ರಾಭಾಕರರು** ನಾಲ್ಕರೊಡನೆ ಅರ್ಥಾಪತ್ತಿಯನ್ನು ಸೇರಿಸಿ ಐದು ಪ್ರಮಾಣಗಳನ್ನೂ, **ಭಾಟ್ಟ ಮತದವರು** ಮತ್ತು **ಅದ್ವೈತಿಗಳು** ಈ ಐದರ ಜೊತೆಗೆ ಅನುಪಲಬ್ಧಿ ಪ್ರಮಾಣವನ್ನು ಸೇರಿಸಿ ಆರು ಪ್ರಮಾಣಗಳನ್ನೂ, **ಪೌರಾಣಿಕರು** ಮತ್ತು **ಐತಿಹಾಸಿಕರು** ಆರರ ಜೊತೆಗೆ ಸಂಭವ ಮತ್ತು ಐತಿಹ್ಯಗಳೂ ಸೇರಿ ಒಟ್ಟು ಎಂಟು ಪ್ರಮಾಣಗಳನ್ನೂ ಅಂಗೀಕರಿಸಿರುವರು. ಹೀಗೆ ಅವರು ಅಂಗೀಕರಿಸಿರುವ ಉಪಮಾ ಮೊದಲಾದ ಐದು ಪ್ರಮಾಣಗಳೂ ಪ್ರತ್ಯಕ್ಷ-ಅನುಮಾನ ಮತ್ತು ಶಬ್ದ ಪ್ರಮಾಣಗಳಲ್ಲಿಯೇ ಅಂತರ್ಗತವಾಗುವುದರಿಂದ ಈ ಮೂರು ಪ್ರಮಾಣಗಳನ್ನು ಮುಖ್ಯವಾಗಿ ವೀರಶೈವ ಆಚಾರ್ಯರು ಸ್ಪಷ್ಟಪಡಿಸಿದ್ದಾರೆ. ಅಂದರೆ ಅನುಪಲಬ್ಧಿಯು ಪ್ರತ್ಯಕ್ಷಪ್ರಮಾಣದಲ್ಲಿಯೂ, ಉಪಮಾನ-ಅರ್ಥಾಪತ್ತಿ, ಸಂಭವಗಳು ಅನುಮಾನಪ್ರಮಾಣದಲ್ಲಿಯೂ, ಐತಿಹ್ಯವು ಶಬ್ದಪ್ರಮಾಣದಲ್ಲಿಯೂ ಅಂತರ್ಭಾವವಾಗುವುವೆಂಬುದೇ ಇವರ ಅಭಿಪ್ರಾಯವಾಗಿರುವುದು.

ಶಕ್ತಯೋಽಸ್ಯ ಜಗತ್ ಕೃತ್ಸ್ನಂ ಶಕ್ತಿಮಾಂಶ್ಚ ಮಹೇಶ್ವರಃ ।
ಶಕ್ತಿಶಕ್ತಿಮತೋರ್ಯಸ್ಮಾತ್ ವ್ಯತಿರೇಕಂ ನ ಗಚ್ಛತಿ ॥
ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹಕಯೋರಿವ ॥

ಎಂಬ ಆದ್ಯೋಕ್ತಿ ಹಾಗೂ **"ಶಕ್ತ್ಯಾದಿಪೃಥಿವ್ಯಂತಂ ಶಿವತತ್ತ್ವ ಸಮುದ್ಭವಂ"** ಮುಂತಾದ ಪ್ರಮಾಣಗಳಿಂದ ನಿಖಿಲ ವಿಶ್ವವೂ ಶಿವಶಕ್ತಿ ಪರಿಣಾಮವೇ ಆಗಿದೆ. ॥ ೧೫ ॥

# ಶರಣಸ್ಥಳ

ಈಷಣಾತ್ರಯವನ್ನು ಅಂದರೆ ವಿತ್ತೇಚ್ಛೆ, ಪುತ್ರೇಚ್ಛೆ ಮತ್ತು ಲೋಕೇಚ್ಛೆ ಇವುಗಳನ್ನು ದಾಟಿ ಎಲ್ಲವನ್ನು ಶಿವಾರ್ಪಿತಮಾಡಿ ನಿತ್ಯಶಿವ ಜ್ಞಾನದಲ್ಲಿ ನಿರತನಾಗಿರುವುದು ಶರಣಸ್ಥಲದ ಮುಖ್ಯಲಕ್ಷಣ. ಈ ಭಾವವು ಇಲ್ಲಿ ಉಕ್ತವಾಗಿರುವುದರಿಂದ ಇದಕ್ಕೆ **ಶರಣಸ್ಥಲ**ವೆಂದು ಭಾಷ್ಯಕಾರರು ಕರೆದಿದ್ದಾರೆ.

ಪ್ರಪಂಚಾಂತರ್ಗತನಾದ ಜೀವಾತ್ಮನಿಗೆ ಪ್ರತ್ಯಗಾತ್ಮನ ಅಭಿನ್ನತ್ವ ಅರ್ಥಾತ್ ಪರಶಿವಾಭಿನ್ನತ್ವವನ್ನು "**ಯತ್ಪರಂ**" ಎಂಬ ಮಂತ್ರದಿಂದ ನಿರೂಪಿಸಲಾಗಿದೆ.

## ಮೂಲ

**ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್ ।**
**ಸೂಕ್ಷ್ಮಾತ್ಸೂಕ್ಷ್ಮತರಂ ನಿತ್ಯಂ ಸ ತ್ವಮೇವ ತ್ವಮೇವ ತತ್**
**॥ ೧೬ ॥**

**ಅರ್ಥ :—**ಸರ್ವಾತ್ಮಾ=ಸಕಲ ಚರಾಚರ ಭೂತಾಂತರ್ಗತನಾಗಿ, ವಿಶ್ವಸ್ಯ = ಜಗತ್ತಿಗೆ, ಆಯತನಂ = ಆಲಯವಾಗಿರುವುದರಿಂದಲೇ, ಮಹತ್=ಮಹತ್ತಿಗೆ ಮಹತ್ತಾಗಿರುವ, ಸೂಕ್ಷ್ಮಾತ್ ಸೂಕ್ಷ್ಮತರಂ= ಅತಿಸೂಕ್ಷ್ಮವಾಗಿರುವ, ನಿತ್ಯಂ=ತ್ರಿಕಾಲಾಬಾಧಿತವಾಗಿರುವ, ಪರಂ= ಶ್ರೇಷ್ಠವಾದ, ಯದ್‌ಬ್ರಹ್ಮ=ಯಾವ ಲಿಂಗಶಬ್ದವಾಚ್ಯನಾದ ಮಹಾದೇವ ನಿರುವನೋ, ಸತ್=ಸತ್‌ರೂಪವಾಗಿರುವ, ತತ್=ಆ ಬ್ರಹ್ಮವೇ, ತ್ವಮೇವ=ಅಂಗ (ಜೀವ) ಶಬ್ದವಾಚ್ಯವಾದ ನೀನೇ ಆಗಿರುವೆ, ತ್ವಮೇವ= ನೀನೇ, ತತ್=ಆ ಪರಬ್ರಹ್ಮವು.

**ತಾತ್ಪರ್ಯ :—"ಸ್ವಶಕ್ತಿಪ್ರಚಯೋಽಸ್ಯ ವಿಶ್ವಂ"** (೩–೩೦) ಎಂಬ ಶಿವಸೂತ್ರಪ್ರಮಾಣದಂತೆ ಪರಬ್ರಹ್ಮನ ಶಕ್ತಿವಿಕಾಸದಿಂದ ಪ್ರವೃತ್ತಿ

ಮಾರ್ಗದಲ್ಲಿ ಶಿವಾದಿಪೃಥಿವ್ಯಂತವಾಗಿ ಪರಿಣಮಿಸಿದ ಬ್ರಹ್ಮವು ಕಿರಿದರಿಂ ಕಿರಿದಾಗಿ ಹಿರಿದರಿಂ ಹಿರಿದಾಗಿ ಆದಿಮಧ್ಯಾಂತರಹಿತ ನಿತ್ಯಸತ್ಯವಾಗಿ ಸಚ್ಚಿದಾನಂದ ನಿತ್ಯಪರಿಪೂರ್ಣತ್ವಾದಿ ಲಕ್ಷಣಗಳಿಂದ ಕೂಡಿರುವ ಪರಬ್ರಹ್ಮವೇ ಅಂಗಶಬ್ದವಾಚ್ಯನಾಗಿರುವ ಜೀವನಾಗಿರುವನೆಂದು ಶ್ರುತಿಯು ಪ್ರತಿಪಾದಿಸಿದೆ. ಇದನ್ನೇ '**ತತ್ತ್ವಮಸಿ**' ಮುಂತಾದ ಮಹಾವಾಕ್ಯಗಳು ಸಮರ್ಥಿಸುತ್ತವೆ.

**ತತ್ತ್ವಮಸಿ** ಎಂಬಲ್ಲಿ ಅದ್ವೈತಿಗಳು ಜಹದಜಹ (ಭಾಗತ್ಯಾಗ) ಲ್ಲಕ್ಷಣ ಸ್ವೀಕಾರದಿಂದ ಜೀವಬ್ರಹ್ಮರಲ್ಲಿ ವಿಶೇಷಣಾಂಶತ್ಯಾಗಮಾಡಿ ಕೇವಲ ವಿಶೇಷ್ಯ ಭಾಗಕ್ಕೆ ಅದ್ವೈತವನ್ನು ಹೇಳುತ್ತಾರೆ. ಇದಕ್ಕೆ ಮಾಯಾವಾದಿಗಳಾದ ಅವರು ಬ್ರಹ್ಮವು ಮಾಯೆಯಲ್ಲಿ ಪ್ರತಿಫಲಿಸಿ ಈಶ್ವರನೆಂದೂ, ಅವಿದ್ಯೆಯಲ್ಲಿ ಪ್ರತಿಫಲಿಸಿ ಜೀವನೆಂದೂ ಹೆಸರಿಸಲ್ಪಟ್ಟಿದೆಯೆಂದೂ, ನಿರ್ವಿಶೇಷವಾದ ಬ್ರಹ್ಮದಲ್ಲಿ ಜೀವಜಗತ್ತುಗಳು 'ರಜ್ಜು-ಸರ್ಪ' ದಂತೆಯೂ 'ಶುಕ್ತಿ-ರಜತ'ದಂತೆಯೂ ವಿವರ್ತವೆಂದೂ, ಅಧ್ಯಸ್ತವೆಂದೂ ಒಪ್ಪಿ, ಜೀವ ಮತ್ತು ಜಗತ್ತುಗಳನ್ನು ಮಿಥ್ಯೆಯೆಂದು ಹೇಳುತ್ತಾರೆ. ಇದರಿಂದ '**ಜೀವೋ ಬ್ರಹ್ಮೈವ ನಾಪರಃ**' ಎಂಬ ಅವರ ಅದ್ವೈತಸಿದ್ಧಿಯಾಗುತ್ತದೆ.

ಆದರೆ ವೀರಶೈವ ಸಿದ್ಧಾಂತವು ಈ ಮಾಯಾವಾದವನ್ನು ಅಂಗೀಕರಿಸದೆ, ಜೀವನು ಪರಮಾತ್ಮನ ಅಂಶವೆಂದೂ "**ತತ್ಸೃಷ್ಟ್ವಾ ತದೇವಾನುಪ್ರಾವಿಶತ್**" (ತೈ. ಆನಂದವಲ್ಲಿ ೬) ಮುಂತಾದ ಅನೇಕ ಪ್ರಮಾಣಗಳಿಂದ ಜಗತ್ತು ಶಿವನ ಪರಿಣಾಮವೆಂದೂ ಗ್ರಹಿಸಿ, ಜೀವಜಗತ್ತುಗಳು ಸತ್ಯವೆಂದೇ ಸಿದ್ಧಾಂತಮಾಡಿದೆ. ಅಂಶಾಂಶಿ ಭಾವದಿಂದ ಕೂಡಿರುವ ಜೀವಬ್ರಹ್ಮರ ಐಕ್ಯವು ವಾಚ್ಯವೃತ್ತಿಯಿಂದಲೇ ನಿರ್ವಾಹವಾಗುತ್ತಿರುವಾಗ ಲಕ್ಷಣಾವೃತ್ತಿ (ಜಘನ್ಯವೃತ್ತಿ)ಸ್ವೀಕಾರವು ಅನಾವಶ್ಯಕವೆಂದು ಸಿದ್ಧಾಂತಮಾಡಿದೆ.

"ಮಣ್ಣಿನಿಂದ ಹುಟ್ಟಿದ ಕೊಡ ಮೊದಲಾದುವು ಮಣ್ಣಿಗಿಂತಲೂ ಹೇಗೆ ಬೇರೆಯಲ್ಲವೋ, ಸಮುದ್ರದಿಂದ ಹುಟ್ಟಿದ ನೊರೆ-ತೆರೆ-ಬುದ್ಬುದಾದಿಗಳು ಸಮುದ್ರಕ್ಕಿಂತಲೂ ಹೇಗೆ ಬೇರೆಯಲ್ಲವೊ ಹಾಗೆಯೇ ಶಿವತತ್ತ್ವದಿಂದುತ್ಪನ್ನವಾದೀ ಜಗತ್ತು ಕಾರಣಕಾರ್ಯಗಳಿಗೆ ಅಭೇದವಾದ್ದರಿಂದ

ಶಿವನಿಗಿಂತಲೂ ಭಿನ್ನವಾಗುವುದಿಲ್ಲ" (ಸಿ. ಶಿ. ಪ. ೧೦)ವೆಂದು ರೇಣುಕ ಭಗವತ್ಪಾದರೇ ಹೇಳಿದ್ದಾರೆ.

ಕಾರ್ಯರೂಪವಾಗಿದ್ದರೂ ಜಗತ್ತು ಕಾರಣಕ್ಕಿಂತ ಬೇರೆಯಲ್ಲವಾದ್ದರಿಂದ '**ತಸ್ಯೈವಾಹಂ**' 'ಅವನವನೇ ನಾನು' '**ತವೈವಾಹಂ**' 'ನಿನ್ನವನೇ ನಾನು' '**ತ್ವಮೇವಾಹಂ**' 'ನೀನೇ ನಾನು' ಎಂಬುದರಿಂದ ಅನುಭವ ಅನುಸಂಧಾನರೂಪವಾದ **ಶರಣಭಾವವು** ವ್ಯಕ್ತವಾಗುತ್ತದೆ. ॥ ೧೬ ॥

# ಐಕ್ಯಸ್ಥಳ

ಇಲ್ಲಿಂದ ಮುಂದೆ ಜೀವನ್ಮುಕ್ತನ ಸ್ವರೂಪವನ್ನು ಹೇಳುತ್ತಾನೆ.

## ಮೂಲ

**ಜಾಗ್ರತ್‌ಸ್ವಪ್ನಸುಷುಪ್ತ್ಯಾದಿಪ್ರಪಂಚಂ ಯತ್ಪ್ರಕಾಶತೇ ।**
**ತದ್‌ಬ್ರಹ್ಮಾಹಮಿತಿ ಜ್ಞಾತ್ವಾ ಸರ್ವಬಂಧೈಃ ಪ್ರಮುಚ್ಯತೇ ॥**

**ಅರ್ಥ :—**ಯತ್=ಯಾವ ಪರಬ್ರಹ್ಮದ ದೆಸೆಯಿಂದ, ಜಾಗ್ರತ್‌ ಸ್ವಪ್ನಸುಷುಪ್ತ್ಯಾದಿಪ್ರಪಂಚಂ=ಜಾಗ್ರದಾದಿ ಮೂರು ಅವಸ್ಥೆಗಳುಳ್ಳ ಸಮಸ್ತವ್ಯಾಪಾರವೂ ಸಹ, ಪ್ರಕಾಶತೇ=ಬೆಳಗುತ್ತದೆಯೋ, ತದ್ ಬ್ರಹ್ಮ= ಆ ಪರಶಿವಬ್ರಹ್ಮವೇ, ಅಹಂ=ನಾನೆಂದು, ಜ್ಞಾತ್ವಾ=ತಿಳಿದು, ಮುನಿಃ= ಶಿವಯೋಗಿಯು (ಮುಮುಕ್ಷುವು), ಸರ್ವಬಂಧೈಃ=ಅವಿದ್ಯಾ ಸಂಬಂಧ ವಾದ ಸಮಸ್ತ ಹೃದಯಗ್ರಂಥಿ (ಕಾಯಜೀವರ ಹೊಲಿಗೆ)ಗಳಿಂದ ಪ್ರಮುಚ್ಯತೇ=ಸಂಪೂರ್ಣವಾಗಿ ಬಿಡಲ್ಪಡುತ್ತಾನೆ.

**ತಾತ್ಪರ್ಯ :—**ಈ ಮಂತ್ರದಲ್ಲಿ ಹೇಳಿರುವ ಜೀವನ್ಮುಕ್ತತ್ವಸ್ಥಿತಿ ಯನ್ನು "ಸ್ಥಿತಪ್ರಜ್ಞನ" ರೀತಿಗೆ ಹೋಲಿಸಬಹುದಾಗಿದೆ. **"ನ ತತ್ರ ಸೂರ್ಯೋ ಭಾತಿ....' ...ತಸ್ಯ ಭಾಸಾ ಸರ್ವಮಿದಂ ವಿಭಾತಿ'** (ಕಠ. ಅ. ೨. ೨. ೧೫.) (ಅವನ ಪ್ರಕಾಶದಿಂದಲೇ ಇದೆಲ್ಲವೂ ಬೆಳಗು ತ್ತದೆ). **'ಯದ್ ಭಾಸಾ ಭಾಸತೇ ವಿಶ್ವಂ ಯತ್ಸುಖೇನಾನು ಮೋದತೇ'** (ಸಿ. ಶಿ. ಪ. ೧–ಶ್ಲೋ. ೪) (ಯಾವ ಪರವಸ್ತುವಿನ ಪ್ರಭಾವ ದಿಂದ ನಿಖಿಲವಿಶ್ವವು ಬೆಳಗುತ್ತದೆಯೋ ಮತ್ತು ಯಾವ ಪರವಸ್ತುವಿನ ಸುಖ ದಿಂದ ಆನಂದಿಸುತ್ತದೆಯೋ) ಎಂಬ ಪ್ರಮಾಣಾನುಸಾರವಾಗಿ ಸರ್ವ ಪ್ರಕಾಶಕವೂ, ಸರ್ವ ಆನಂದದಾಯಕವೂ ಆದ ಆ ಪರಶಿವಬ್ರಹ್ಮದ ದೆಸೆಯಿಂದಲೇ ವಿಶ್ವತೈಜಸಪ್ರಾಜ್ಞಾಖ್ಯವಾದ ಜೀವನು ಜಾಗ್ರತ್‌ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲಿಯೂ ರೂಪ, ರುಚಿ, ತೃಪ್ತಿ ಗಳನ್ನು ಹೊಂದಿ ಪ್ರಕಾಶಿಸುತ್ತಾನೆ. ಅಂತಹ ಪರಶಿವಬ್ರಹ್ಮವೇ ತಾನೆಂದು

ಭಾವಿಸುವ ಸ್ಥಿತಿಯೇ "ಜೀವನ್ಮುಕ್ತ"ನ ಅವಸ್ಥೆ. ಇದನ್ನೇ '**ಬ್ರಾಹ್ಮೀ ಸ್ಥಿತಿ**'ಯೆಂದು (೨-೭) ಭಗವದ್ಗೀತೆಯಲ್ಲಿ ಹೇಳಿದೆ. "ಆಗ ಮನುಷ್ಯನು ಮನಸ್ಸಿನಲ್ಲೇಳುತ್ತಿರುವ ಆಸೆಗಳೆಲ್ಲವನ್ನೂ ಬಿಟ್ಟು ಆತ್ಮದ ಮೂಲಕವೇ ಆತ್ಮನಲ್ಲಿ ಸಂತುಷ್ಟನಾಗುವ ಸ್ಥಿತಿಯನ್ನೈದುವನು. ಇದರಿಂದ ಅವನು ದುಃಖದಿಂದ ದುಃಖಿತನೂ, ಸುಖದಿಂದ ಆಶಾರಹಿತನೂ ಆಗಿ ರಾಗ, ಭಯ, ಕ್ರೋಧಗಳನ್ನುಳಿದು ಸ್ಥಿರಬುದ್ಧಿಯುಳ್ಳವನಾಗಿರುತ್ತಾನೆ. ಆಮೆಯು ಎಲ್ಲ ಕಡೆಯಿಂದ ತನ್ನ ಅಂಗಗಳನ್ನು ಒಳಕ್ಕೆಳೆದುಕೊಳ್ಳುವಂತೆ ಇಂದ್ರಿಯಗಳನ್ನು ಅವುಗಳ ವಿಷಯಗಳಿಂದ ಎಳೆದುಕೊಂಡ ಈ ಯೋಗಿಯು ನನ್ನಲ್ಲಿ ತನ್ಮಯನಾಗುತ್ತಾನೆ. ಎಲ್ಲ ಆಸೆಗಳನ್ನೂ ತ್ಯಜಿಸಿ ಇಚ್ಛೆ-ಮಮತೆ-ಅಹಂಕಾರಗಳಿಲ್ಲದವನಾಗಿ ನಡೆಯುವವನೇ ಜೀವನ್ಮುಕ್ತ ಅಥವಾ ಸ್ಥಿತಪ್ರಜ್ಞನೆಂದು ಹೇಳಿಸಿಕೊಳ್ಳುತ್ತಾನೆ." (ಭ.ಗೀ. ಅ. ೨. ೫೫-೭೨)

ಇದರಿಂದ ಅವನ ಹೃದಯಗ್ರಂಥಿ ಎಂದರೆ ಕಾಯ ಮತ್ತು ಜೀವರ ಸಂಬಂಧವು ಸಡಿಲವಾಗುತ್ತದೆ. ಅವನಿಗೆ ಆತ್ಮ-ಅನಾತ್ಮದ ವಿವೇಕವುದಿಸುತ್ತದೆ. ಪರಾವರ (ಪರಾತ್ಪರ) ವಸ್ತು ದರ್ಶನಮಾತ್ರದಿಂದಲೇ ಅವನೆಲ್ಲ ಸಂಶಯಗಳೂ ನಷ್ಟವಾಗಿ ಕರ್ಮವು ಕ್ಷೀಣವಾಗುತ್ತದೆ. ಇದನ್ನೆ '**ಭಿದ್ಯತೇ ಹೃದಯಗ್ರಂಥಿಃ**' ಮುಂತಾದ ಶ್ರುತಿಗಳು ಸಮರ್ಥಿಸುತ್ತವೆ. ॥ ೧೭ ॥

## ಮೂಲ

**ತ್ರಿಷು ಧಾಮಸು ಯದ್‌ಭೋಗ್ಯಂ ಭೋಕ್ತಾ ಭೋಗಶ್ಚ ಯದ್ಭವೇತ್। ತೇಭ್ಯೋ ವಿಲಕ್ಷಣಸ್ಸಾಕ್ಷೀ ಚಿನ್ಮಾತ್ರೋಽಹಂ ಸದಾಶಿವಃ ॥ ೧೮ ॥**

**ಅರ್ಥ**:—ತ್ರಿಷು ಧಾಮಸು=ಜಾಗ್ರತ್ ಸ್ವಪ್ನ ಸುಷುಪ್ತಿ ಎಂಬ ಮೂರು ಸ್ಥಾನಗಳಲ್ಲಿ, ಯತ್=ಯಾವ ವಸ್ತುವು, ಭೋಗ್ಯಂ=ಅನುಭವಿಸಲು ಯೋಗ್ಯವಾದ ವಸ್ತುವೊ, ಭೋಕ್ತಾ=ಅದನ್ನು ಅನುಭವಿಸುವ

ಜೀವನೂ, ಭೋಗಃ=ತದ್ರೂಪವಾದ ವ್ಯಾಪಾರವೂ, ಯದ್‌ಭವೇತ್=ಯಾವುದುಂಟೋ, ತೇಭ್ಯಃ=ಆ ಮೂರಕ್ಕಿಂತಲೂ, ವಿಲಕ್ಷಣಃ-ಉಪಾದಾನಕಾರಣನಾದ್ದರಿಂದ ವಿಶಿಷ್ಟ ಸಚ್ಚಿದಾನಂದ ಸ್ವರೂಪನೂ, ನಿಮಿತ್ತಕಾರಣನಾದ್ದರಿಂದ, ಸಾಕ್ಷೀ=ಸಾಕ್ಷಿಮಾತ್ರನೂ ಆದ ಚಿನ್ಮಾತ್ರಃ=ಕೇವಲ ಚೈತನ್ಯಮಯನಾದ, ಸದಾಶಿವಃ=ಸಾಕ್ಷಾತ್ ಪರಶಿವಬ್ರಹ್ಮವೇ, ಅಹಂ=ಅಹಂ ಶಬ್ದಗೋಚರನಾದ ನಾನೆಂಬುವನು.

**ತಾತ್ಪರ್ಯ :—" ಶಿವೋ ಭೋಕ್ತಾ ಶಿವೋ ಭೋಗ್ಯಂ ಶಿವೋ ಭೋಗಃ ಶಿವೋಽಖಿಲಮ್ । ಶಿವ ಏವ ಶಿವೋಽಹಂ ತು ತಸ್ಮಾದನ್ಯನ್ನ ವಿದ್ಯತೇ ॥"** ಎಂಬ ಪ್ರಮಾಣಾನುಸಾರವಾಗಿ "ಯಾವನು **ಭೋಕ್ತೃ, ಭೋಗ್ಯ ಭೋಗ** ರೂಪಗಳಾದ ಪದಾರ್ಥಗಳೂ ಸಮಸ್ತಪ್ರಪಂಚವೂ ನಾನು ಕೂಡ ಶಿವನೇ ಆಗಿದ್ದೇನೆಂದು ದೃಢವಾಗಿ ಭಾವಿಸುವನೋ, ಅವನಿಗೆ ಶಿವಾತಿರಿಕ್ತವಾಗಿ ಯಾವುದೂ ತೋರುವುದಿಲ್ಲ." ತಾನು, ತನ್ನವರು ಎಂಬ ಅಹಂಕಾರಮಮಕಾರಗಳೂ ಅವನಿಗಿರುವುದಿಲ್ಲ. ಅವನು ತನ್ನಲ್ಲಿ ಸಮಸ್ತಪ್ರಪಂಚವನ್ನೂ ಪ್ರಪಂಚದಲ್ಲಿ ತನ್ನನ್ನೂ ಭಾವಿಸುವ ಮಟ್ಟಕ್ಕೆ ಮುಟ್ಟಿರುತ್ತಾನೆ. **'ಮಮಾತ್ಮಾ ಸರ್ವಭೂತಾಂತರಾತ್ಮಾ'** ಎಂಬ ಭಾವವು ಅವನಿಗೆ ದೃಢವಾಗಿರುತ್ತದೆ.

ಪರಶಿವನಲ್ಲಿ ಅವಿನಾಭಾವಸಂಬಂಧದಿಂದಿರುವ ವಿಮರ್ಶಶಕ್ತಿಯು ಸತ್ವರಜಸ್ತಮೋಗುಣಗಳ ತಾರತಮ್ಯದಿಂದ ಶುದ್ಧಚಿದ್ರೂಪನಾದ **ಪರಶಿವ**ನಲ್ಲಿ **ಭೋಕ್ತೃ, ಭೋಜ್ಯ, ಪ್ರೇರಕ** ರೂಪವಾಗಿ ಪರಿಣಮಿಸುವುದು. ಕಿಂಚಿಜ್ಞತ್ವ **ರಜೋಗುಣ** ರೂಪವಾದ ಜೀವಚೈತನ್ಯವೇ **'ಭೋಕ್ತೃ'**ವು. ಅತ್ಯಂತ **ತಾಮಸೋಪಾಧಿ** ವಿಶಿಷ್ಟವಾದ ಚೈತನ್ಯವು ರಸಾದಿರೂಪ **'ಭೋಜ್ಯ'**ವು. ಪರತತ್ತ್ವರೂಪ ಶುದ್ಧಸತ್ವಗುಣೋಪಾಧಿವಿಶಿಷ್ಟ ಬ್ರಹ್ಮಚೈತನ್ಯವಾದ ಮಹೇಶ್ವರನೇ **'ಪ್ರೇರಕ'**ನೆನಿಸುವನು.

ಇದರಂತೆ ಮಾಯೋಪಾಧಿಯು ಶುದ್ಧ ಮತ್ತು ಅಶುದ್ಧವೆಂದು ಎರಡು ಪ್ರಕಾರವಾಗಿರುವುದು. ಶುದ್ಧೋಪಾಧಿರೂಪ **ಪರಾಮಾಯೆ**ಯು ಶಿವನನ್ನು ಆಶ್ರಯಿಸಿಕೊಂಡಿದ್ದರೂ ಅವನಿಗೆ ಮೋಹವನ್ನುಂಟುಮಾಡುವುದಿಲ್ಲ. ಇದಕ್ಕೆ **'ಊರ್ಧ್ವಮಾಯೆ'**ಯೆಂದು ಹೆಸರು. ಅಶುದ್ಧೋ-

**ಪಾಧಿ** ರೂಪ ಅವಿದ್ಯೆಯು ಜೀವನನ್ನು ಆಶ್ರಯಿಸಿಕೊಂಡಿದ್ದು, ಅವನನ್ನು ಮೋಹಗೊಳಿಸುವುದು. ಇದಕ್ಕೆ '**ಅಧೋಮಾಯೆ**' (ಪ್ರಕೃತಿ)ಯೆಂದು ಹೆಸರು. ಅವಿದ್ಯಾಶಕ್ತಿಭೇದದಿಂದ ಜೀವನು ನಾನಾಪ್ರಕಾರನಾಗುವನು. ಅವಿದ್ಯಾಮೋಹಿತನಾದ ಜೀವನು '**ಅಹಂ ಬ್ರಹ್ಮಾಸ್ಮಿ**' ಎಂಬ ಅಭೇದ ಜ್ಞಾನಶೂನ್ಯನಾಗಿರುತ್ತಾನೆ. ಆದುದರಿಂದಲೇ ಅವನು ಕಿಂಚಿಜ್ಞತ್ವ, ಕಿಂಚಿತ್ಕರ್ತೃತ್ವದಿಂದ ಕೂಡಿ ಘೋರಾಪಾರನಿಸ್ಸಾರಸಂಸಾರ ತಾಪತ್ರಯಾನಲದಂದಹ್ಯಮಾನನಾಗಿ ಜನನಮರಣರೂಪ ಪಾಶಬದ್ಧನಾಗಿರುತ್ತಾನೆ. ಇವನು ವೇಧಾ, ಕ್ರಿಯಾ, ಮನು ಎಂಬ ದೀಕ್ಷಾತ್ರಯದಿಂದ ಪಾಶಮುಕ್ತನಾಗಿ "**ಚಿನ್ಮಾತ್ರೋಽಹಂ ಸದಾಶಿವಃ**" ಎಂಬ ಪ್ರತ್ಯಯಾನುಭವಿಯಾಗುತ್ತಾನೆಂಬುದೇ ಈ ಮಂತ್ರದಲ್ಲಿ ಸುಂದರವಾಗಿ ವರ್ಣಿತವಾಗಿದೆ.

ಪಾಶವಿಮೋಚನೆಗೆ ಕರ್ಮ, ಜ್ಞಾನಗಳಿಗಿಂತಲೂ ಭಕ್ತಿಯೇ ಮುಖ್ಯ ಸಾಧನವೆಂಬುದನ್ನು ಅನುಭವಸೂತ್ರ ಮೊದಲಾದ ವೀರಶೈವ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಿದೆ. "**ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ**" ಎಂಬುದರಿಂದ ಈ ಕೈವಲ್ಯಶ್ರುತಿಯು ಭಕ್ತಿಗೆ ಪ್ರಾಮುಖ್ಯವನ್ನಿತ್ತಿದೆ.

"**ಭೋಗ್ಯ, ಭೋಕ್ತಾ, ಭೋಗ** ಎಂಬುವುಗಳನ್ನು ಜಾಗ್ರತ್‌ಸ್ವಪ್ನಸುಷುಪ್ತಿ ಅವಸ್ಥೆಗಳಲ್ಲಿ ಅನುಭವಿಸುವ ವಿಧಾನವನ್ನು ಅರಿತವನು ವಿಷಯಗಳಿಂದ ನಿರ್ಲಿಪ್ತನಾಗುತ್ತಾನೆ. **ಕರ್ಮಕಾಂಡವು** 'ಧರ್ಮಾಧರ್ಮಾತ್ಮಕವಾದ ಎಲ್ಲ ಕರ್ಮಗಳಿಗೂ ನಾನೇ ಕರ್ತನೆಂಬ ಅಭಿಮಾನದಿಂದ ಕೂಡಿದೆ. **ಜ್ಞಾನಕಾಂಡವು** ನಾನು ಕರ್ತೃವೂ ಅಲ್ಲ, ಇವನಿಗೆ ಕರ್ತೃತ್ವವೂ ಇಲ್ಲ. ಸ್ವಾಭಾವಿಕವಾಗಿ ನಾನು ಸಾಕ್ಷಿಮಾತ್ರನು ಎಂಬ ಅಭಿಮಾನವುಳ್ಳದ್ದಾಗಿದೆ. ಆದರೆ **ಭಕ್ತಿಕಾಂಡವು** ಮಾತ್ರ ಇವೆರಡಕ್ಕಿಂತ ಒಂದು ಹೆಜ್ಜೆ ಮುಂದಿದೆ. ಇಲ್ಲಿ 'ನಾನು ಕರ್ತೃವೂ ಅಲ್ಲ' 'ನಾನು ಸಾಕ್ಷಿಯೂ ಅಲ್ಲ' 'ಈ ಎಲ್ಲ ಕರ್ಮಗಳಿಗೂ ಶಿವನೇ ಕರ್ತಾ ಮತ್ತು ಸಾಕ್ಷಿ' ಎಂಬ '**ಭರನ್ಯಾಸ**'ವನ್ನು ಬೋಧಿಸುವುದರಿಂದ **ಭಕ್ತಿ**ಮಾರ್ಗವು ಸರ್ವಶ್ರೇಷ್ಠವಾದುದು.

ಭಕ್ತಿಮಾರ್ಗದ ಹಿರಿಮೆಯನ್ನು "**ಶುಕ್ತಿಃ ಕರ್ಮಪದಂ**" ಎಂಬ ಪದ್ಯದಲ್ಲಿ ರೂಪಕೋಪಮಾಲಂಕಾರ ರೂಪದಿಂದ ಮನೋಹರವಾಗಿ ಚಿತ್ರಿಸಿದೆ.

ಕರ್ಮವು ಮುತ್ತಿನ ಚಿಪ್ಪು, ಜ್ಞಾನವು ಕಮಲ, ಭಕ್ತಿಯು ಕಾಯ್ದ ಕಬ್ಬಿಣವಿದ್ದಂತಿವೆ. ಇವುಗಳಲ್ಲಿ ಮೇಘದ ಸಂಸ್ಕಾರವೆಂಬ ನೀರು ಬಿದ್ದದ್ದಾದರೆ ಯಾವ ಯಾವ ಪರಿಣಾಮ ಹೊಂದುವುದೆಂಬುದನ್ನು ಹೀಗೆ ಹೇಳಿದ್ದಾನೆ. ಮುತ್ತಿನ ಚಿಪ್ಪಿನಲ್ಲಿ ಬಿದ್ದ ಮಳೆ ನೀರು ಮುತ್ತಾ(ಸಫಲವಾ)ಗುತ್ತದೆ. ಹಾಗೆಯೇ ವೇದೋಕ್ತ ಕರ್ಮಾನುಷ್ಠಾನದಿಂದ ಸ್ವರ್ಗಾದಿ ಐಹಿಕ ಫಲಗಳು ಪ್ರಾಪ್ತವಾಗುತ್ತವೆ. ಕಮಲದಲ್ಲಿ ಬಿದ್ದ ನೀರು ಆಕಾರಮಾತ್ರದಿಂದ ಇದ್ದು ವಿಫಲತ್ವಂ ಎಂದರೆ ನಾಮರೂಪಗಳನ್ನಳಿದು ತದ್ರೂಪವಾಗುತ್ತದೆ. ಅಂದರೆ ಜ್ಞಾನಮಾರ್ಗದಿಂದ ಜೀವನು ಜ್ಞಾನಮಯನಾಗುತ್ತಾನೆ. ಇನ್ನು ಕಾಯ್ದ ಕಬ್ಬಿಣದಮೇಲೆ ಬಿದ್ದ ಮಳೆ ನೀರು ಆಗಲೇ ಸಂಪೂರ್ಣ ತನ್ನ ಆಕಾರವನ್ನೆಲ್ಲ ಅಳಿದು ನಾಶ (ನಿರ್ಲೇಪ)ವೇ ಆಗುತ್ತದೆ. ಅರ್ಥಾತ್ ಭಕ್ತಿಮಾರ್ಗಾನುಷ್ಠಾನಮಾಡಿ ಸರ್ವವೂ ಶಿವನೆಂದೇ ಭಾವಿಸುವುದರಿಂದ ಉರಿಯುಂಡ ಕರ್ಪೂರದಂತೆ ಜೀವನಿಗೆ ಕೈವಲ್ಯವೇ ಪ್ರಾಪ್ತವಾಗುತ್ತದೆ. ಅಂದಮೇಲೆ ಭಕ್ತಿಮಾರ್ಗದ ಮಹಿಮೆಯನ್ನು ಏನು ಹೇಳಬೇಕು?

ಭಕ್ತಿಮಾರ್ಗಗಾಮಿಯಾದ ಭಕ್ತನು ನಿವೃತ್ತಿಮಾರ್ಗದಲ್ಲಿ ಏರುತ್ತಿರುವಾಗ ಸದಾಶಿವ ತತ್ತ್ವವನ್ನು ಮುಟ್ಟಿದಾಗ '**ಸಾದಾಖ್ಯ**'ನೆನಿಸುವನು. ಇದಕ್ಕೆ 'ಸಾದಾಖ್ಯತತ್ತ್ವ'ವೆಂದೂ ಹೆಸರು. ಅಂದರೆ '**ಸತ್ ಆಖ್ಯಾತಿಃ**' ಯಾವುದರಿಂದ ಅಸ್ತಿತ್ವದ ಕಲ್ಪನೆ ಆರಂಭವಾಗುವುದೋ ಅದೇ ಸಾದಾಖ್ಯ ತತ್ತ್ವವಾಯಿತು. '**ಚಿನ್ಮಾತ್ರೋಽಹಂ ಸದಾಶಿವಃ**' ಎಂಬಲ್ಲಿ 'ಸಾದಾಖ್ಯ'ನೆನಿಸಿದ ಜೀವನು ಚಿದ್‌ವಿಶಿಷ್ಟನಾಗಿ ಶಕ್ತಿ-ಶಿವ ತತ್ತ್ವಗಳಲ್ಲಿ ಐಕ್ಯನಾಗುವುದಕ್ಕೆ ಈ ತತ್ತ್ವವು ದ್ವಾರವೆನಿಸುತ್ತದೆ. ಈ ಸ್ಥಿತಿಯನ್ನು ಈ ಮಂತ್ರದಲ್ಲಿ ನಿರೂಪಿಸಿದೆ. ॥ ೧೮ ॥

## ಮೂಲ

**ಮಯ್ಯೇವ ಸಕಲಂ ಜಾತಂ ಮಯಿ ಸರ್ವಂ ಪ್ರತಿಷ್ಠಿತಮ್ । ಮಯಿ ಸರ್ವಂ ಲಯಂ ಯಾತಿ ತದ್‌ಬ್ರಹ್ಮಾದ್ವಯಮಸ್ಮ್ಯಹಮ್ ॥ ೧೯ ॥**

**ಇತಿ ಪ್ರಥಮಃ ಖಂಡಃ**

**ಅರ್ಥ :—** ಮಯ್ಯೇವ ಎಂಬಲ್ಲಿ 'ಮಯ್ಯೈವ' ಎಂದು ಹೇಳಬೇಕು. (ಸಪ್ತಮೀವಿಭಕ್ತಿಯು ಛಾಂದಸ) ಮಯ್ಯೈವ = ಪರಶಿವ ಬ್ರಹ್ಮಸ್ವರೂಪನಾಗಿ ನಿಮಿತ್ತೋಪಾದಾನಕಾರಣನೆನಿಸಿದ ನನ್ನಿಂದಲೇ ಸಕಲಂ = ಚರಾಚರಾತ್ಮಕವಾದ ಸಮಸ್ತ ಪ್ರಪಂಚವೂ ಜಾತಂ = ಆವಿರ್ಭವಿಸಿತು (ಸೃಷ್ಟಿ). ಮತ್ತೆ ಮಯಿ ಎಂಬುದಕ್ಕೆ ಮತ್ತಃ ಎಂದು ಭಾವಿಸಬೇಕು. ಮತ್ತಃ = ನನ್ನ ದೆಸೆಯಿಂದಲೇ ಸರ್ವಂ = ನಿಖಿಲ ವಿಶ್ವವೂ ಪ್ರತಿಷ್ಠಿತಂ = ಸುಪ್ರತಿಷ್ಠಿತವಾಗಿದೆ, (ಸ್ಥಿತಿ) ಮಯಿ = ನನ್ನಲ್ಲಿಯೇ ಸರ್ವಂ = ಸಮಸ್ತವೂ ಲಯಂ = ಕಾಣದಿರುವಿಕೆಯನ್ನು (ಲಯ) ಯಾತಿ = ಹೊಂದುತ್ತದೆ. ತತ್ = ಅಂತಹ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದ ಅದ್ವಯಂ ಬ್ರಹ್ಮ = ಸಜಾತೀಯ ವಿಜಾತೀಯ ಭೇದರಹಿತ ಸ್ವಗತ ಇಷ್ಟ ಪ್ರಾಣ ಭಾವಲಿಂಗ ರೂಪ ಭೇದ ಯುಕ್ತವಾದ ಪರಶಿವ ಬ್ರಹ್ಮವೇ ಅಹಮಸ್ಮಿ = ನಾನೇ ಆಗಿದ್ದೇನೆ.

**ತಾತ್ಪರ್ಯ :—'ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತೀತಿ'** (ತೈತ್ತಿರೀಯ ಶ್ರುತಿ) ಯಾವುದರಿಂದ ನಿಖಿಲ ಭೂತ ಪ್ರಪಂಚವೂ ಹುಟ್ಟುತ್ತದೆಯೋ, ಯಾವುದರಿಂದ ಹುಟ್ಟಿದುದೆಲ್ಲವೂ ಜೀವಿಸಿರುತ್ತದೆಯೊ, ಕಡೆಗೆ ಯಾವುದರಲ್ಲಿ ಇದೆಲ್ಲವೂ ನಾಮರೂಪವಳಿದು ಅಡಗುತ್ತದೆಯೋ— ಅದೇ 'ಬ್ರಹ್ಮ' ಎಂಬ ಶ್ರುತಿವಚನಾನುಸಾರವಾಗಿ ಪರಶಿವ ಬ್ರಹ್ಮದ ಸ್ವರೂಪವಿರುತ್ತದೆ. ಇದನ್ನೇ ಅನುಭವಸೂತ್ರಕಾರರು 'ಸ್ಥಲ'ವೆಂದು ನಿರ್ವಚನಮಾಡಿದ್ದಾರೆ. ಅಂದರೆ "**ಪ್ರಕೃತಿ ಮತ್ತು ಪುರುಷತತ್ತ್ವ**ಗಳಿಂದ ಪ್ರಾರಂಭವಾದ ನಿಖಿಲ ಚರಾಚರ ಪ್ರಪಂಚವೂ ಯಾವುದರಲ್ಲಿ ಮೊದಲಿದ್ದು ಕಡೆಗೆ ಯಾವುದರಲ್ಲಿ ಲಯವನ್ನು ಹೊಂದುತ್ತದೆಯೋ ಅದೇ

'**ಸ್ಥಲ**' ಶಬ್ದ ವಾಚ್ಯವಾದಪರಶಿವಬ್ರಹ್ಮ". ಆ ಸ್ಥಲವೇ "**ಲೀಯತೇ ಗಮ್ಯತೇ ಯತ್ರ ಜಗದೇತಚ್ಚರಾಚರಂ**" ಎಂಬುದರಿಂದ '**ಲಿಂಗ**' ಶಬ್ದ ವಾಚ್ಯವೂ ಆಗಿದೆ. '**ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ**' 'ರುದ್ರನೊಬ್ಬನೇ ಹೊರತು ಮತ್ತೊಬ್ಬನಿಲ್ಲ' ಎಂಬ ಪ್ರಮಾಣಾನುಸಾರವಾಗಿ ಅವನೊಬ್ಬನೇ. ಅಂತಹ ಶಿವನಲ್ಲಿ '**ಶಿವೋಽಹಂ**' '**ಶಿವೋಽಹಂ**' ಎಂದು ಭ್ರಮರವನ್ನು ನೆನೆವ ಕೀಟದಂತೆ ಪದೇ ಪದೇ ನೆನೆಯುತ್ತಿರುವುದೇ ಶಿವತ್ವವನ್ನು ಹೊಂದುವುದಕ್ಕೆ ಮುಖ್ಯಕಾರಣವು. ಜಗತ್ತೆಲ್ಲವೂ ಶಿವನೇ ಆಗಿರುವುದರಿಂದ ಜಗತ್ತಿನಲ್ಲಿ ಸೇರಿರುವ ತಾನೂ ಶಿವನೇ ಆಗಿರಬೇಕು ಎಂಬ ದೃಢನಿಶ್ಚಯದಿಂದ ಭಾವಿಸುತ್ತಿರುವ ಯೋಗಿಗೆ ಭವದೋಷಗಳು ಯಾವುವೂ ಇರುವುದಿಲ್ಲ.' (ಸಿ. ಶಿ. ಪ. ೧೬–೧೯)

ಇದಕ್ಕೆ "ಶಿವಪಂಚಾಕ್ಷರೀ" ಜಪವು ಮುಖ್ಯಸಾಧನವು. ಇಲ್ಲಿ '**ನಮಃ**' ಎಂಬುದು ಅಂಗ (ಜೀವ) ನನ್ನೂ '**ಶಿವಃ**' ಎಂಬುದು ಲಿಂಗವನ್ನೂ ಬೋಧಿಸುತ್ತದೆ. '**ಅಯ**' ಎಂಬ ಚತುರ್ಥೀ ವಿಭಕ್ತಿಯು ಜೀವ(ಅಂಗ)ನು ಶಿವನಿಗಾಗಿ ಪ್ರಯತ್ನಿಸುತ್ತಿರುವ ಸ್ಥಿತಿಯನ್ನು ಬೋಧಿಸುತ್ತದೆ. ಪರಶಿವಬ್ರಹ್ಮವಾಚಕವಾದ ಪ್ರಣವಸಹಿತವಾಗಿ ಜೀವ ಬ್ರಹ್ಮರ ಐಕ್ಯಾನುಸಂಧಾನ ಪೂರ್ವಕವಾದ ಈ "ಶಿವಷಡಕ್ಷರೀ" ಮಂತ್ರವನ್ನು ಜಪಿಸುವುದರಿಂದ ನಿಜವಾಗಿಯೂ ಶಿವತ್ವರೂಪ ಕೈವಲ್ಯಪ್ರಾಪ್ತಿಯಾಗುತ್ತದೆ. ಅನುಭವ ಸೂತ್ರಕಾರರು '**ನಮಃ ಶಿವಾಯೇತಿ ಶಿವಂ ಪ್ರಪದ್ಯೇ**' ಎಂಬ ಸೂತ್ರದಲ್ಲಿ '**ನಮಶ್ಶಿವಾಯ**' (ಜೀವನೇ ಶಿವನು) '**ಶಿವ ಪ್ರಸೀದ**' (ಶಿವನೇ ಪ್ರಸನ್ನನಾಗು) '**ಶಿವಾತ್ ಪರಂ ನ**' (ಶಿವನಿಗಿಂತ ಬೇರಿಲ್ಲ) ಆದುದರಿಂದ '**ಶಿವೋಽಹಂ**' (ಶಿವನೇ ನಾನು)" ಎಂದು ಐಕ್ಯಸ್ಥಳದ ಸ್ವರೂಪವನ್ನೂ ನಿರ್ವಚನಮಾಡಿದ್ದಾರೆ.

ಇನ್ನು 'ಅಂಗ' ಶಬ್ದವಾಚ್ಯನಾದ ಜೀವನು ಶಿವಪಂಚಾಕ್ಷರೀ ಅಭ್ಯಾಸದಿಂದ ಕಡೆಗೆ ಶಿವನೇ ಆದುದರಿಂದ ಅಂಗಸ್ಥಲೋಕ್ತವಾದ **ತ್ಯಾಗಾಂಗ, ಭೋಗಾಂಗ, ಯೋಗಾಂಗ** ಪ್ರತಿಪಾದ್ಯನಾದ **ಭಕ್ತ–ಮಹೇಶ; ಪ್ರಸಾದಿ–ಪ್ರಾಣಲಿಂಗಿ; ಶರಣ–ಐಕ್ಯ** ಎಂಬ ಆರು ಅಂಗ ಸ್ಥಳಗಳು ಕ್ರಮವಾಗಿ **ಸದ್ಭಕ್ತಿ–ನೈಷ್ಠಿಕಭಕ್ತಿ; ಅವಧಾನಭಕ್ತಿ–ಅನು**

**ಭಾವ ಭಕ್ತಿ; ಆನಂದಭಕ್ತಿ–ಸಮರಸಭಕ್ತಿ** ಎಂಬ ಭಕ್ತಿ ವಿಶಿಷ್ಟವಾಗಿ ಲಿಂಗಸ್ಥಲೋಕ್ತವಾದ **ಇಷ್ಟ, ಪ್ರಾಣ, ಭಾವಲಿಂಗ** ಪ್ರತಿಪಾದ್ಯವಾದ **ಆಚಾರಲಿಂಗ** (ಕ್ರಿಯಾಶಕ್ತಿ)–**ಗುರುಲಿಂಗ** (ಜ್ಞಾನಶಕ್ತಿ); **ಶಿವಲಿಂಗ** (ಇಚ್ಛಾಶಕ್ತಿ)–**ಚರ**(ಜಂಗಮ) **ಲಿಂಗ** (ಆದಿಶಕ್ತಿ); **ಪ್ರಸಾದಲಿಂಗ** (ಪರಾಶಕ್ತಿ)–**ಮಹಾಲಿಂಗ** (ಚಿತ್ ಶಕ್ತಿ) ಎಂಬ ಲಿಂಗ ಸ್ಥಲಗಳಲ್ಲಿ ಐಕ್ಯ ವಾಗುತ್ತವೆ. ಅಂದರೆ ಅಂಗಸ್ಥಲ ಪ್ರತಿಪಾದ್ಯನಾದ ಭಕ್ತನು ಲಿಂಗಸ್ಥಲ ಪ್ರತಿಪಾದ್ಯವಾದ ಆಚಾರಲಿಂಗದಲ್ಲಿ ಸದ್ಭಕ್ತಿಯ ಮೂಲಕ ಸಾಮರಸ್ಯ ವನ್ನು ಹೊಂದುವನು. ಇದರಂತೆಯೇ ಮಹೇಶ್ವರನು ನೈಷ್ಠಿಕಭಕ್ತಿ ಯಿಂದ ಗುರುಲಿಂಗದಲ್ಲಿಯೂ, ಪ್ರಸಾದಿಯು ಅವಧಾನಭಕ್ತಿಯಿಂದ ಶಿವಲಿಂಗದಲ್ಲಿಯೂ, ಪ್ರಾಣಲಿಂಗಿಯು ಅನುಭವ ಭಕ್ತಿಯಿಂದ ಜಂಗಮ ಲಿಂಗದಲ್ಲಿಯೂ, ಶರಣನು ಆನಂದ ಭಕ್ತಿಯಿಂದ ಪ್ರಸಾದ ಲಿಂಗದಲ್ಲಿಯೂ, ಐಕ್ಯನು ಸಮರಸಭಕ್ತಿಯಿಂದ ಮಹಾಲಿಂಗದಲ್ಲಿಯೂ ಸಾಮರಸ್ಯವನ್ನು ಹೊಂದುವನು. ಈ ಸ್ಥಿತಿಯನ್ನೇ ಸಿದ್ಧಾಂತ ಶಿಖಾಮಣಿಯಲ್ಲಿ ಹೀಗೆ ಹೇಳಿದೆ:–'ನೀರಿನಲ್ಲಿ ನೀರನ್ನು ಕೂಡಿಸಿದಂತೆಯೂ, ಬೆಂಕಿಯಲ್ಲಿ ಬೆಂಕಿಯನ್ನು ಕೂಡಿಸಿದಂತೆಯೂ, ಶಿವಾದ್ವೈತಿಯಾದ ವೀರಶೈವನು ಷಟ್‌ಸ್ಥಲಾಚರಣೆ ಯಿಂದ ಪರಶಿವ ಬ್ರಹ್ಮನಲ್ಲಿ ಸಮರಸಗೊಂಡು ಏಕಾಕಾರನಾಗುವನು, ಗಾಳಿಯಲ್ಲಿ ಸುಳಿಗಾಳಿಯು, ನೀರಿನಲ್ಲಿ ನೀರ ಹನಿಯು ಕೂಡುವಂತೆ ಅಂಗಗತ ಚೈತನ್ಯವು ಶುದ್ಧವಾಗಿ ಲಿಂಗಚೈತನ್ಯದಲ್ಲಿ ಬೆರೆಯುವುದು. ಅದೇ "ಲಿಂಗಾಂಗಸಾಮರಸ್ಯ"ವು. ಆ ಸಾಮರಸ್ಯವಾಯಿತೆಂದರೆ ಅಂಗ ಸ್ಥಳದ ಸುಖದುಃಖಾದಿ ದ್ವಂದ್ವಗಳೆಲ್ಲ ಅಳಿದುಹೋಗಿ ಲಿಂಗ ಸ್ಥಳದಲ್ಲಿರುವ **ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ** ಮುಂತಾದ ಲಕ್ಷಣಗಳು ಅಳವಡುವುವು. ಅಲ್ಲಿ ಅದ್ವೈತಾನಂದವಿರುವುದು. ಅದೇ **ಪರಮ ಗತಿಯು.** ಷಟಸ್ಥಳಗಳಲ್ಲಿ ಕೊನೆಯದಾದ **ಐಕ್ಯ ಸ್ಥಳವು** ಅದೇ. **ಶೂನ್ಯ ಸಂಪಾದನೆ**ಯೂ ಇದೆಯೇ. ಏಕೆಂದರೆ ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ನಮಗೆ ಗೋಚರವಾಗುವುದೆಲ್ಲ. ಈ ಸ್ಥಿತಿಯಲ್ಲಿ ಶೂನ್ಯವಾಗಿರುವುದು. ವೇದಾಂತಿಗಳು ಹೇಳುವ **ತುರೀಯ**ವೆಂಬ ಚತುರ್ಥ ಅವಸ್ಥೆಯು ಇದೇ. ಇದಕ್ಕೆ ಯೋಗಿಗಳು '**ನಿರ್ವಿಕಲ್ಪ ಸಮಾಧಿ**' ಇಲ್ಲವೆ '**ಅಸಂಪ್ರಜ್ಞಾತ**

**ಸಮಾಧಿ'** ಎನ್ನುವರು. ಈ ಅನುಭವವು ಅವರ್ಣನೀಯವೂ ವಾಙ್ಮನಕ್ಕೆ ಅಗೋಚರವೂ ಇರುವುದು. ಆ ಸ್ಥಿತಿಯಲ್ಲಿ ಪರಮೈಶ್ವರ್ಯದ ಒಂದೇ ಒಂದು ಅನುಭವವಾಗಿರುವುದರಿಂದ, **'ಜ್ಞಾತೃ-ಜ್ಞೇಯ-ಜ್ಞಾನ'** ಈ ತ್ರಿಪುಟಿಯು ಐಕ್ಯವಾಗಿರುವುದರಿಂದ ಅಲ್ಲಿ ವರ್ಣನಾದಿಗಳು ಅಸಂಭವನೀಯ. ಈ ಅನುಭವದ ಅವಸ್ಥೆಯನ್ನು ಮುಂಡಕ ಶ್ರುತಿಯು '**ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂ ಗಚ್ಛಂತಿ ನಾಮ ರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥**' (೩—೨—೮).

'ನದಿಗಳು ಸಮುದ್ರದಲ್ಲಿ ಸೇರಿ ತಮ್ಮ ತಮ್ಮ ನಾಮರೂಪಗಳನ್ನು ಬಿಟ್ಟು ಸಾಮರಸ್ಯವನ್ನು ಹೊಂದುವಂತೆ, ಶಿವಜ್ಞಾನವುಳ್ಳ ಶಿವಭಕ್ತನು ನಾಮ ರೂಪಗಳಿಂದ ವಿಮುಕ್ತನಾಗಿ ಪರಶಿವನಲ್ಲಿ ಸಾಮರಸ್ಯವನ್ನು ಹೊಂದುವನು.' ಇದನ್ನೇ ಕೈವಲ್ಯ ಶ್ರುತಿಯು '**ತದ್ ಬ್ರಹ್ಮಾದ್ವಯಮಸ್ಮ್ಯಹಮ್**' ಎಂದು ಉದ್ಘೋಷಿಸಿದೆ.

ಶಿವಾದ್ವೈತಪರವಾದ ಕೈವಲ್ಯೋಪನಿಷತ್ತಿನ ಸಾದಾಶಿವಭಾಷ್ಯದ ಮೊದಲನೆಯ
ಖಂಡಕ್ಕೆ **ಶಿವಾದ್ವೈತ ವಿದ್ಯಾಭೂಷಣ ಆಸ್ಥಾನ ವಿದ್ವಾನ್**
**ಮ. ಗಂ. ನಂಜುಂಡಾರಾಧ್ಯ**ರಿಂದ ವಿರಚಿತವಾದ
'**ಭಾವಪ್ರಕಾಶ**'ವೆಂಬ ಕನ್ನಡ
ತಾತ್ಪರ್ಯವು ಮುಗಿದುದು



# ಎರಡನೆಯ ಖಂಡ

ಈ ಖಂಡದಲ್ಲಿ ಪೂಜ್ಯ ಮತ್ತು ಪೂಜಕರಿಗೆ ಅಭೇದವನ್ನು ನಿರೂಪಿಸುತ್ತಾನೆ:

## ಮೂಲ

ಅಣೋರಣೀಯಾನಹಮೇವ ತದ್ವ
ನ್ಮಹಾನಹಂ ವಿಶ್ವಮಹಂ ವಿಚಿತ್ರಮ್ ।
ಪುರಾತನೋಽಹಂ ಪುರುಷೋಽಹಮೀಶೋ
ಹಿರಣ್ಮಯೋಽಹಂ ಶಿವರೂಪಮಸ್ಮಿ ॥ ೨೦ ॥

ಅಪಾಣಿಪಾದೋಽಹಮಚಿಂತ್ಯಶಕ್ತಿಃ
ಪಶ್ಯಾಮ್ಯಚಕ್ಷುಃ ಸ ಶೃಣೋಮ್ಯಕರ್ಣಃ ।
ಅಹಂ ವಿಜಾನಾಮಿ ವಿವಿಕ್ತರೂಪೋ
ನ ಚಾಸ್ತಿ ವೇತ್ತಾ ಮಮ ಚಿತ್ಸದಾಹಮ್ ॥೨೧॥

**ಅರ್ಥ:**—ಅಹಮೇವ=ಕಿಂಚಿಜ್ಞತ್ವಾದಿ ಧರ್ಮವುಳ್ಳ ಶಿವೋಪಾಸಕನಾದ ನಾನೆಂಬುವನೇ, ಅಣೋರಣೀಯಾನ್=ಸೂಕ್ಷ್ಮವಸ್ತುವಿಗಿಂತಲೂ ಅತಿ ಸೂಕ್ಷ್ಮವಾದ ಪರಮಾತ್ಮಸ್ವರೂಪನು, ತದ್ವತ್=ಅದರಂತೆಯೇ, ಮಹಾನ್=ಮಹತ್ತಿಗಿಂತಲು ಮಹತ್ತರನಾದವನೂ, ವಿಶ್ವಂ=ಜಗದ್ರೂಪವಾಗಿ ಪರಿಣಾಮವನ್ನು ಹೊಂದಿರುವವನೂ, ವಿಚಿತ್ರಂ=ಭಕ್ತಾನುಗ್ರಹಕ್ಕಾಗಿ ವಿರೂಪಾಕ್ಷ, ಚಂದ್ರಶೇಖರ ಮುಂತಾದ ವಿಲಕ್ಷಣ ಲೀಲಾಸ್ವರೂಪಧಾರಣೆ ಮಾಡಿರುವವನೂ, ಪುರಾತನಃ=ಅತ್ಯಂತ ಪ್ರಾಚೀನನೂ, ಪುರುಷಃ=ಸ್ಥೂಲ, ಸೂಕ್ಷ್ಮ, ಕಾರಣ ಪುರ(ಶರೀರ)ಗಳಲ್ಲಿ ಅಂಗುಷ್ಠಮಾತ್ರದಿಂದ ವಾಸಿಸುವನೂ, ಈಶಃ=ಸಕಲ ಪ್ರಪಂಚಕ್ಕೂ ಒಡೆಯನೂ, ಹಿರಣ್ಮಯಃ=ಸುವರ್ಣಕಾಂತಿಯುಳ್ಳ ಜ್ಯೋತಿರ್ಲಿಂಗ ಸ್ವರೂಪನೂ

ಆದ, ಶಿವಃ=ಸರ್ವಜ್ಞತ್ವ, ಸರ್ವಕರ್ತೃತ್ವ, ಸಚ್ಚಿದಾನಂದನಿತ್ಯಪರಿಪೂರ್ಣತ್ವವೇ ಮೊದಲಾದ ಪಂಚಲಕ್ಷಣಗಳುಳ್ಳ ಪರಶಿವಬ್ರಹ್ಮಸ್ವರೂಪವೇ, ಅಹಂ ಅಸ್ಮಿ=ಅಹಂ ಗ್ರಹೋಪಾಸನೆಯಿಂದ ಜೀವತ್ವವನ್ನು ಕಳೆದುಕೊಂಡವನಾಗಿದ್ದೇನೆ. ॥ ೨೦ ॥

ಅಹಂ=ಪೂರ್ವೋಕ್ತಲಕ್ಷಣಯುಕ್ತ ಶಿವಸ್ವರೂಪನಾದ್ದರಿಂದ, ಅಪಾಣಿಪಾದಃ = ಇತರ ಪ್ರಾಣಿ ಸಾಮಾನ್ಯದಂತೆ ಕರಚರಣಾದಿ ಕರ್ಮೇಂದ್ರಿಯಗಳಿಲ್ಲದವನಾದರೂ ಸಹ, ಅಚಿಂತ್ಯಶಕ್ತಿಃ=ನಡೆಯುವುದು ಹಿಡಿಯುವುದು ಮುಂತಾದ ಕ್ರಿಯೆಗಳುಳ್ಳವನಾದ್ದರಿಂದ ಊಹಿಸಲು ಸಾಧ್ಯವಿಲ್ಲದ ಇಚ್ಛಾಶಕ್ತಿಯುಳ್ಳವನು, ಆದುದರಿಂದಲೇ, ಅಚಕ್ಷುಃ=ಪ್ರಾಕೃತ ಭೌತಿಕಚರ್ಮಚಕ್ಷು (ಕಣ್ಣು)ಗಳಿಲ್ಲದವನಾದರೂ, ಪಶ್ಯಾಮಿ=ನೇತ್ರಸ್ಥಾನೀಯವಾದ ಶಿವಲಿಂಗ ಮುಖದಿಂದ (ದಿವ್ಯದೃಷ್ಟಿಯಿಂದ) ಸಮಸ್ತವನ್ನೂ ನೋಡುತ್ತೇನೆ. ಅಕರ್ಣಃ=ಪ್ರಾಕೃತವಾದ ಕಿವಿಗಳಿಲ್ಲದವನಾದರೂ ಕರ್ಣಸ್ಥಾನೀಯವಾದ ಪ್ರಸಾದಲಿಂಗಮುಖದಿಂದ ಶೃಣೋಮಿ=ಶಬ್ದಗ್ರಹಣಮಾಡುತ್ತೇನೆ. ಇದರಂತೆ ಉಳಿದ ಘ್ರಾಣ, ಜಿಹ್ವೆ, ತ್ವಕ್, ಮನಸ್ಸು ಮುಂತಾದ ಪ್ರಾಕೃತ ಜ್ಞಾನೇಂದ್ರಿಯಗಳಿಲ್ಲದವನಾದರೂ ಕ್ರಮವಾಗಿ ಆಯಾ ಇಂದ್ರಿಯಸ್ಥಾನೀಯಗಳಾದ ಆಚಾರಲಿಂಗ, ಗುರುಲಿಂಗ, ಜಂಗಮಲಿಂಗ ಮತ್ತು ಮಹಾಲಿಂಗಗಳ ಮೂಲಕ ಆಯಾ ವಿಷಯಗ್ರಹಣ ಮಾಡುತ್ತಿದ್ದೇನೆ. ವಿವಿಕ್ತರೂಪಃ=ಇಷ್ಟಪ್ರಾಣಭಾವಾತ್ಮಕ ವಿವಿಧ ರೂಪಗಳನ್ನು ತಾಳಿ ಅಥವಾ ಅತಿ ಸೂಕ್ಷ್ಮನಾಗಿ, ಅಹಂ ವಿಜಾನಾಮಿ=ಸಮಸ್ತವನ್ನೂ ವಿಶೇಷ ರೀತಿಯಿಂದ ತಿಳಿಯುತ್ತೇನೆ. ಸದಾ=ನಿರಂತರದಲ್ಲಿಯೂ ಸಹ, ಅಹಂ=ನಾನು, ಚಿತ್=ಚೈತನ್ಯಮಾತ್ರನಾಗಿದ್ದೇನೆ. ಮಮ=ನನ್ನ ಮಹಿಮಾ ವೈಭವವನ್ನು, ವೇತ್ತಾ=ಬಲ್ಲವನು, ನಾಸ್ತಿ=ಮತ್ತಾರೂ ಇರುವುದಿಲ್ಲ. ॥ ೨೧ ॥

**ತಾತ್ಪರ್ಯ :**—ಅಹಂಗ್ರಹೋಪಾಸನೆಯಲ್ಲಿ ನಿರತನಾದ ಉಪಾಸಕನು ಶಿವತ್ವವನ್ನು ಪಡೆಯುವ ಸ್ಥಿತಿಯಲ್ಲಿ ಅವನ ಅನುಭವಪ್ರಕಾರವು ಈ ಖಂಡದಲ್ಲಿ ವಿಸ್ತರಿಸಲ್ಪಟ್ಟಿದೆ. ಯದ್ಯಪಿ ಬ್ರಹ್ಮಜ್ಞಾನವಾದ ಮೇಲೆ ನಾನು, ಶಿವನು, ಇವು ವಿಷಯಗಳು, ಇವು ಅವನ್ನು ಗ್ರಹಿಸುವ ಇಂದ್ರಿಯಗಳು, ಇವನು

ಉಪಾಸಕ, ಇದು ಉಪಾಸ್ಯ ಎಂಬ ಭೇದಜ್ಞಾನವೆಲ್ಲ ಅಳಿದು, ಕೇವಲ ನಿರ್ವಿಕಲ್ಪತ್ವಸ್ಥಿತಿಯಲ್ಲಿ ಆನಂದಮಯವಾಗಿರುವುದರಿಂದ ಇಂತಹ ಪರಿಜ್ಞಾನಕ್ಕೆ ಅವಕಾಶವೇ ಇರುವುದಿಲ್ಲ. ಆದರೆ ಇಲ್ಲಿ ಹೇಳಿರುವುದು ಆ ಸ್ಥಿತಿಯನ್ನು ಪಡೆಯುವುದಕ್ಕೆ ಮೊದಲಿನ ಸಾಧನ ಸ್ಥಿತಿ. ಪರಮಾತ್ಮನಲ್ಲಿನ ಅಗಣಿತ ಮಹಿಮಾವಿಶೇಷಗುಣಗಳನ್ನು ತನ್ನಲ್ಲಿ ಭಾವಿಸಿಕೊಂಡು ಅನುಸಂಧಾನಮಾಡುವುದರಿಂದ ಲೋಹರಸನ್ಯಾಯದಂತೆ ತಾನೂ ತದ್ರೂಪನಾಗುವುದರಿಂದ ಇಲ್ಲಿ ಅದರ ವಿಧಾನವನ್ನು ಹೇಳಿದೆ. ಮೊದಲಿನ ಮಂತ್ರದಲ್ಲಿ ಪರವಸ್ತುವಿನ ಅನಂತಕಲ್ಯಾಣ ಗುಣಗಳನ್ನು ಹೇಳಿದೆ.

ಅಣುವಿಗಿಂತಲೂ ಅಣುವೂ, ಮಹತ್ತಿಗಿಂತಲೂ ಮಹತ್ತೂ, ಜಗತ್ತಿಗೆ ನಿಮಿತ್ತಕಾರಣನಾದರೂ ಸಹ ಜಗದ್ರೂಪವಾಗಿ ಪರಿಣತವಾಗಿರುವವನೂ, ಲೋಕವಿಲಕ್ಷಣವಾದ ಲೀಲಾ ವಿಗ್ರಹಗಳನ್ನೂ ನಾನಾ ರೂಪಗಳನ್ನೂ ಪಡೆದವನೂ, ಸನಾತನನೂ, ಪ್ರಾಣಿಗಳ ಶರೀರದಲ್ಲಿ ಅಂಗುಷ್ಠಮಾತ್ರ ಪ್ರಮಾಣದಿಂದ ವಾಸಿಸುವವನೂ, ಜ್ಯೋತಿರ್ಮಯನಾದ ಶಿವನೇ ನಾನಾಗಿರುವೆನೆಂದು ಉಪಾಸಕನು ಅನುಕ್ಷಣವೂ ಧ್ಯಾನಿಸುವುದರಿಂದ ಅವನಲ್ಲಿ ಶಿವಾತ್ಮಕತ್ವವು ಸ್ವಾಭಾವಿಕವಾಗಿ ಉದಯಿಸುತ್ತದೆಯೆಂಬುದೇ ಈ ಮಂತ್ರದ ಆಶಯವು. ಇಲ್ಲಿ ಹೇಳಿರುವ ವಿಶೇಷ ಗುಣಗಳು '**ಅಣೋರಣೀಯಾನ್**' (ತೈ. ಆ. ೭–೧೦) '**ಈಶಾನೋ ಭೂತಭವ್ಯಸ್ಯ**' (ಕಠ. ೨–೧೩) '**ಅಂಗುಷ್ಠಮಾತ್ರಃ ಪುರುಷಃ**' (ಶ್ವೇತಾಶ್ವತರ. ೩–೧೩) '**ನಮೋ ಹಿರಣ್ಯಬಾಹವೇ**' (ತೈ. ಆ. ೭–೨೨) ಮುಂತಾದ ಶ್ರುತಿಗಳಲ್ಲಿ ಉಕ್ತವಾಗಿವೆ.

ಇನ್ನು ಎರಡನೆಯ ಮಂತ್ರದಲ್ಲಿ ತದ್ಧ್ಯಾನಬಲದಿಂದ ಬರುವ ತತ್ತ್ವಾನುಭವವನ್ನು ಹೇಳಿದೆ. ಈಶಾವಾಸ್ಯದಲ್ಲಿನ '**ಅನೇಜದೇಕಂ**' '**ಸಪರ್ಯಗಾಚ್ಛುಕ್ರ**' (ಈಶ. ೧, ೪·೮) ಮಂತ್ರಗಳಲ್ಲಿ ಮಹಾಲಿಂಗ ಸ್ವರೂಪವಾದ ಆತ್ಮವು ಅಚಲವು, ಏಕವು, ಮನಸ್ಸಿಗಿಂತ ವೇಗವುಳ್ಳದ್ದು. ಯಾವುದು ಎಲ್ಲಕ್ಕೂ ಮೊದಲೇ ಆದುದಾದ್ದರಿಂದ ದೇವತೆಗಳಿಗೂ ಸಹ ಪ್ರಾಪ್ತವಾಗಲಿಲ್ಲವೋ ಅಂತಹ ಆ ವಸ್ತುವು ತಾನು ನಿಂತಲ್ಲಿ ನಿಂತಿದ್ದರೂ ಧಾವಿಸುತ್ತಿರುವ ಮಿಕ್ಕ ವಸ್ತುಗಳನ್ನು ದಾಟಿ ಹೋಗುವುದು. ಆ ಪರ

ವಸ್ತುವಿನಲ್ಲಿನ ವಾಯು (ಪ್ರಾಣಲಿಂಗವು) ಅಂದರೆ ವಿಶ್ವನಿರ್ಮಾಣ ಶಕ್ತಿಯು ಅಪ್ಪನ್ನು ಎಂದರೆ ಕರ್ಮಶಕ್ತಿಗಳನ್ನು ಸ್ಥಾಪಿಸುವುದು. ಅಂತಹ ಮಹಾಲಿಂಗಸ್ವರೂಪನಾದ ಆತ್ಮನೇ ಎಲ್ಲ ದಿಕ್ಕುಗಳಲ್ಲಿಯೂ ಪಸರಿಸುವನು. ಅವನು "ತೇಜಸ್ವಿಯು, ಅಶರೀರನು, ಘಾಯರಹಿತನು, ಸ್ನಾಯುರಹಿತನು, ಶುದ್ಧನು, ಪಾಪಲೇಪವಿಲ್ಲದವನು, ಕವಿಯು, ಬುದ್ಧಿವಂತನು, ಸರ್ವವ್ಯಾಪಿಯು, ಸ್ವಯಂಭುವು, ಅವನು ಅನಾದಿಕಾಲದಿಂದ ಸಕಲ ಪದಾರ್ಥಗಳನ್ನು ಯಥಾಯೋಗ್ಯವಾಗಿ ವ್ಯವಸ್ಥೆಮಾಡಿರುವನು" ಎಂಬ ವಿಶೇಷಣಗಳು ಕೊಡಲ್ಪಟ್ಟಿವೆ. ಆದರೆ ಹೀಗೆ ಶರೀರೇಂದ್ರಿಯಾದಿಗಳಿಲ್ಲದಿದ್ದರೂ ಸಹ ಅವನು ಸಕಲ ಇಂದ್ರಿಯಗಳಿಗೆ ಶಕ್ತಿಪ್ರದಾತೃವಾಗಿ ಕಣ್ಣಿಗೆ ಕಣ್ಣಾಗಿಯೂ, ಕಿವಿಗೆ ಕಿವಿಯಾಗಿಯೂ, ಮೂಗಿಗೆ ಮೂಗಾಗಿಯೂ, ತ್ವಕ್ಕಿಗೆ ತ್ವಕ್ಕಾಗಿಯೂ, ಜಿಹ್ವೆಗೆ ಜಿಹ್ವೆಯಾಗಿಯೂ, ಮನಸ್ಸಿಗೆ ಮನಸ್ಸಾಗಿಯೂ ಇರುವನೆಂಬುದನ್ನು ಕೇನೋಪನಿಷತ್ತು ಹೇಳುತ್ತದೆ.

"**ಕೇನೇಷಿತಂ**" ಮುಂತಾದ ಮಂತ್ರಗಳಲ್ಲಿ ಮನಸ್ಸು ಯಾರ ಪ್ರೇರಣೆಯಿಂದ ಸಂಕಲ್ಪ ವಿಕಲ್ಪಾತ್ಮಕವಾದ ಅಧ್ಯವಸಾಯಗಳನ್ನು ಮಾಡುತ್ತದೆ? ಪ್ರಾಣವು ಯಾರ ಅಪ್ಪಣೆಯಿಂದ ಶರೀರದ ಹೃದಯಾದಿ ಸ್ಥಾನಗಳಲ್ಲಿ ತನ್ನ ಕೆಲಸ ಮಾಡುತ್ತದೆ? ಇದರಂತೆ ವಾಕ್ಕು, ಕಣ್ಣು, ಕಿವಿ ಮುಂತಾದ ಇಂದ್ರಿಯಗಳು ತಮ್ಮತಮ್ಮ ರೂಪ, ರಸ, ಗಂಧಾದಿ ವಿಷಯಗಳನ್ನು ಗ್ರಹಿಸುತ್ತವೆ? ಎಂದು ಪ್ರಶ್ನೆಮಾಡಿಕೊಂಡು ಉಪನಿಷತ್ತು ಈ ರೀತಿ ಉತ್ತರಿಸುತ್ತದೆ. "ಯಾವುದು ಕಿವಿಗಳ ಕಿವಿಯೋ, ಮನಸ್ಸಿನ ಮನಸ್ಸೊ, ವಾಣಿಯ ವಾಣಿಯೊ, ಅದು ಪ್ರಾಣದ ಪ್ರಾಣವು; ಕಣ್ಣುಗಳ ಕಣ್ಣು; ಧೀರರು ಇವುಗಳಾಚೆಗಿರುವ ಇಂದ್ರಿಯಾತೀತವಾದ ಆ ಪರವಸ್ತುವನ್ನು ಕಂಡು ಶರೀರಾಭಿಮಾನವನ್ನು ತೊರೆದು ಅಮೃತಪದವಿಯನ್ನು ಪಡೆಯುವರು" ಎಂದು ಹೇಳಿದೆ.

ವೀರಶೈವ ಪರಿಭಾಷೆಯಲ್ಲಿ ಈ ಮಂತ್ರಾರ್ಥವು ಹೃದಯಂಗಮವಾಗಿ ಸಂಗತವಾಗುತ್ತದೆ. ಘ್ರಾಣ ಮೊದಲಾದ ಇಂದ್ರಿಯಗಳು ಅಂಗಗಳೆಂದೂ, ಆಯಾ ಸ್ಥಾನಗಳಲ್ಲಿರುವ ಆಚಾರಾದಿ ಲಿಂಗಗಳು ಅಂಗವುಳ್ಳವು

ಗಳೆಂದೂ ಹೇಳಿದೆ. ಇದರಿಂದ ಲಿಂಗವು ಕರ್ತೃವೆಂದೂ, ಇಂದ್ರಿಯವು ಕರಣವೆಂದೂ ಸಿದ್ಧವಾಯಿತು. ಆದುದರಿಂದ ಈ ಕರಣಗಳು ಕರ್ತೃವಿನ ಗಂಧಾದಿ ಪದಾರ್ಥಸ್ವೀಕಾರಕ್ಕೆ ಸಾಧನಗಳಾಗಿ ಕರ್ತೃನಿಷ್ಠಗಳೇ ಆಗುತ್ತವೆ. ಈ ಕಾರಣದಿಂದ ಆ ಕರಣಗಳು ಕರ್ತೃಸ್ವರೂಪಗಳೇ ಆದವು. ಆ ಕರ್ತೃಗಳೂ ಸಹ ಸ್ವತಂತ್ರವಾದ ಪರಮಕರ್ತೃ (ಆತ್ಮ) ವಾದ **ಮಹಾಲಿಂಗ**ನಿಷ್ಠವಾದವು. ಆದುದರಿಂದ ಆ ಕರಣಗಳು ಲಿಂಗಕ್ಕೆ ಅಭಿನ್ನವಾಗಿರುವುದರಿಂದ ಇಂದ್ರಿಯಗಳಿಗೂ ಲಿಂಗಗಳೆಂದು ಸಿದ್ಧ ವಾಯಿತು. ಈ ಸಿದ್ಧಾಂತದಂತೆ ಶಿವನ ಸಂಕುಚಿತಗಳಾದ ಷಡ್ವಿಧ ಶಕ್ತಿ ಗಳೇ ಮನಸ್ಸು ಮೊದಲಾದ ಆರು ಇಂದ್ರಿಯಗಳಾದವು. ಸಾಧಕನು ಬಾಹ್ಯೇಂದ್ರಿಯಗಳನ್ನು ತಡೆದು **ಚಿತ್ತ**ವೆಂಬ ಅಂತರಿಂದ್ರಿಯವನ್ನು ಮಹಾ ಲಿಂಗದಲ್ಲಿ ಸಮರಸಮಾಡಲು ಆ ಚಿತ್ತವು ಶಿವನ ಚಿಚ್ಛಕ್ತಿಯಾಗುತ್ತದೆ. ತರುವಾಯ ಆ ಚಿಚ್ಛಕ್ತಿಯೂ ಮಹಾಲಿಂಗವೇ ಆಗುತ್ತದೆ. ಇದರಂತೆ ಉಳಿದ ಕಣ್ಣು, ಕಿವಿ, ಮುಂತಾದ ಪಂಚೇಂದ್ರಿಯಗಳೂ ಆಯಾ ಶಿವಶಕ್ತಿ ರೂಪಗಳಾಗಿ ಆಯಾ ಲಿಂಗಗಳಲ್ಲಿ ಸಮರಸವಾಗಿ ಆಯಾ ಲಿಂಗ ರೂಪಗಳೇ ಆಗುತ್ತವೆ. ಆದುದರಿಂದ ಇಂದ್ರಿಯಗಳಿಗೆ ಲಿಂಗಗಳೆಂದು ಹೇಳಲಾಗಿದೆ.

ತುರೀಯಾವಸ್ಥೆಯಲ್ಲಿ ಕೇವಲ ದಹರೋಪಾಸನೆಯಲ್ಲಿ ನಿರತನಾದ ಸಾಧಕನ ಭಕ್ತ್ಯಾದ್ಯಂಗರೂಪಶಕ್ತಿಗಳು, ಘ್ರಾಣಾದಿ ಇಂದ್ರಿಯಗಳಿಂದ ಕೂಡಿ ಆಚಾರಾದಿ ಲಿಂಗಗಳಲ್ಲಿ ಅರ್ಪಿತವಾಗಲು, ಅವುಗಳಿಗೆ ಅಂಗಾಂಗಿ ಭಾವವೇರ್ಪಡುತ್ತದೆ. ಆಗ ಇವೆಲ್ಲಕ್ಕೂ ಕರ್ತೃವಾದ **ಊರ್ಧ್ವಲಿಂಗ (ಮಹಾಲಿಂಗ)** ವೊಂದೇ ಇವುಗಳಿಗೆ ಅಧಿಷ್ಠಾನವಾಗಿ ಪ್ರೇರಕವಾಗುತ್ತದೆ.

ಈ ಕ್ರಮದಂತೆ ಗಂಧವೂ, ಅದನ್ನು ಗ್ರಹಿಸುವ ಘ್ರಾಣೇಂದ್ರಿಯವೂ ಅದಕ್ಕೆ ಆಶ್ರಯವಾದ ಪೃಥಿವೀತತ್ವವೂ **ಆಚಾರಲಿಂಗ**ದಲ್ಲಿ ಸಮರಸ ವಾಗುತ್ತದೆ. ಇದರಂತೆ ರಸ, ರಸನೇಂದ್ರಿಯ ಮತ್ತು ತದಾಶ್ರಯವಾದ ಜಲತತ್ವಗಳು **ಗುರುಲಿಂಗ**ದಲ್ಲಿಯೂ; ರೂಪ, ಚಕ್ಷುರಿಂದ್ರಿಯ ಮತ್ತು ಅದಕ್ಕೆ ಆಶ್ರಯವಾದ ತೇಜಸ್ತತ್ತ್ವಗಳು **ಶಿವಲಿಂಗ**ದಲ್ಲಿಯೂ; ಸ್ಪರ್ಶ, ತ್ವಗಿಂದ್ರಿಯ, ವಾಯುತತ್ತ್ವಗಳು **ಜಂಗಮಲಿಂಗ**ದಲ್ಲಿಯೂ; ಶಬ್ದ,

ಶ್ರವಣೇಂದ್ರಿಯ, ಆಕಾಶತತ್ತ್ವಗಳು **ಪ್ರಸಾದಲಿಂಗ**ದಲ್ಲಿಯೂ; ಮತ್ತು ಮನಸ್ಸು, ಅದಕ್ಕಾಶ್ರಯವಾದ ಜೀವಾತ್ಮನು **ಮಹಾಲಿಂಗ**ದಲ್ಲಿಯೂ ಸಮರಸವಾದಾಗಲೆ **ತೃಪ್ತಿ**ಯೆಂದರೆ ನಿಜಾನಂದ ಲಭ್ಯವಾಗುತ್ತದೆ. ಮುಂದೆ ಈ ಆರು ಲಿಂಗಗಳನ್ನು ಕ್ರಮವಾಗಿ **ಆಚಾರಲಿಂಗ**ವನ್ನು ಗುರು ಲಿಂಗದಲ್ಲಿಯೂ, **ಗುರುಲಿಂಗ**ವನ್ನು ಶಿವಲಿಂಗದಲ್ಲಿಯೂ, **ಶಿವಲಿಂಗ**ವನ್ನು ಚರ (ಜಂಗಮ)ಲಿಂಗದಲ್ಲಿಯೂ, **ಜಂಗಮಲಿಂಗ**ವನ್ನು ಪ್ರಸಾದಲಿಂಗ ದಲ್ಲಿಯೂ, **ಪ್ರಸಾದಲಿಂಗ**ವನ್ನು ಮಹಾಲಿಂಗದಲ್ಲಿಯೂ, ಸಮರಸ ಮಾಡುವುದೇ ಶಿವಾದ್ವೈತಿಯ ಅನುಭವಮಾರ್ಗ. ಇಂಥವನಿಗೆ ಉಪನಿಷತ್ತು '**ಧೀರ**' ಎಂಬ ಪ್ರಶಸ್ತಿಯನ್ನು ಪ್ರದಾನಮಾಡಿದೆ. ಆದುದರಿಂದಲೇ ಮಹಾಲಿಂಗಸ್ವರೂಪನಾದ ಆತ್ಮನು ಶ್ರೋತ್ರಕ್ಕೆ ಶ್ರೋತ್ರವೂ, ಕಣ್ಣಿಗೆ ಕಣ್ಣೂ, ಮನಸ್ಸಿಗೆ ಮನಸ್ಸೂ, ಪ್ರಾಣಕ್ಕೆ ಪ್ರಾಣವೂ ಆಗಿರುವನೆಂದು ಹೇಳುತ್ತದೆ. ಶ್ವೇತಾಶ್ವತರದಲ್ಲಿ ಹೇಳಿರುವ "**ಅಪಾಣಿ ಪಾದೋ ಜವನೋ ಗ್ರಹೀತಾ ಪಶ್ಯಾತ್ಯಚಕ್ಷುಃ ಸ ಶೃಣೋತ್ಯ ಕರ್ಣಃ**" (ಅ. ೩–೧೯) ಮುಂತಾದ ಮಂತ್ರಗಳಲ್ಲಿ ಇದೇ ಅರ್ಥವು ಉಕ್ತವಾಗಿದೆ. ಈ ಅಂಶವನ್ನು ಅನುಭವಸೂತ್ರ, ಸಿದ್ಧಾಂತಶಿಖಾಮಣಿ ಮುಂತಾದ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲಾಗಿದೆ.

ಈ ದಹರೋಪಾಸನೆಯ ಅನುಷ್ಠಾನವು ಘನೀಭೂತವಾದಂತೆಲ್ಲ ಸಾಧಕನು '**ಚಿದಾನಂದರೂಪಃ ಶಿವೋಽಹಂ ಶಿವೋಽಹಂ**' ಎಂಬ ನಿರತಿಶಯಾಭೇದಚಿತ್‌ಸ್ವರೂಪತ್ವವನ್ನು ಪಡೆದಿರುತ್ತಾನೆ. ಇಂತಹ ದುರೂಹಾವಸ್ಥೆಯಲ್ಲಿ "**ಚಿನ್ಮಾತ್ರ**"ವಾದ ಆ ಸ್ಥಿತಿಯು ಬೇರೆಯವರಿಗೆ ಅರಿಯುವುದಾದರೂ ಹೇಗೆ? ॥ ೨೦, ೨೧ ॥

## ಮೂಲ

ವೇದ್ಯೈರನೇಕ್ಯೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಮ್ ।
ನ ಪುಣ್ಯಪಾಪೇ ಮಮ ನಾಸ್ತಿ ನಾಶೋ
ನ ಜನ್ಮದೇಹೇಂದ್ರಿಯಬುದ್ಧಿರಸ್ತಿ ॥ ೨೨ ॥
ನ ಭೂಮಿರಾಪೋ ನ ಚ ವಹ್ನಿರಸ್ತಿ
ನ ಚಾನಿಲೋ ಮೇಽಸ್ತಿ ನ ಚಾಂಬರಂ ಚ ।
ಏವಂ ವಿದಿತ್ವಾ ಪರಮಾತ್ಮರೂಪಂ
ಗುಹಾಶಯಂ ನಿಷ್ಕಲಮದ್ವಿತೀಯಮ್ ॥ ೨೩ ॥
ಸಮಸ್ತಸಾಕ್ಷಿಂ ಸದಸದ್ವಿಹೀನಂ
ಪ್ರಯಾತಿ ಶುದ್ಧಂ ಪರಮಾತ್ಮರೂಪಮ್ ॥೨೪॥

**ಅರ್ಥ:**—ಅನೇಕ್ಯೈಃ ವೇದ್ಯೈಃ=ಋಗ್ಯಜುಸ್ಸಾಮಾಥರ್ವಣರೂಪವಾದ ನಾಲ್ಕು ವೇದಗಳಿಂದ, ಅಹಮೇವ=ದಹರೋಪಾಸನೆಯಿಂದ ಶಿವಸ್ವರೂಪ ನಾದ ನಾನೇ, ವೇದ್ಯಃ=ತಿಳಿಯಲ್ಪಡುತ್ತಿದ್ದೇನೆ, ವೇದಾಂತಕೃತ್=ವೇದ ಗಳ ಅಂತ್ಯಭಾಗಗಳೆನಿಸುವ ಈಶಾದಿ ಉಪನಿಷದುಕ್ತವಾದ ಅಧ್ಯಾತ್ಮ ಜ್ಞಾನಕ್ಕೂ ಸಹ ಕರ್ತೃವೂ, ವೇದವಿತ್=ವೇದೋಕ್ತವಾದ ನಿಖಿಲ ಜ್ಞಾನವನ್ನು ಬಲ್ಲವನೂ ಆಗಿದ್ದೇನೆ. ಮಮ=ನನಗೆ, ಪುಣ್ಯಪಾಪೇ= ಧರ್ಮ ಅಧರ್ಮದಿಂದುಂಟಾದ ಪುಣ್ಯಪಾಪಗಳೆರಡೂ ಸಹ, ನಾಸ್ತಿ=ಇರು ವುದಿಲ್ಲ, ನಾಶಃ=ಸಾವು, ಜನ್ಮ=ಹುಟ್ಟುವಿಕೆಯೂ, ಕೇವಲ ಲಿಂಗದೇಹಿ ಯಾಗಿರುವುದರಿಂದ, ದೇಹ=ಶರೀರ, ಇಂದ್ರಿಯ=ಜ್ಞಾನಕರ್ಮಾದಿ ಇಂದ್ರಿಯಗಳು ಇವುಗಳ ವಿಷಯಕವಾದ, ಬುದ್ಧಿಃ=ತಿಳುವಳಿಕೆಯು ಸಹ, ಮಮ=ನನಗೆ, ನಾಸ್ತಿ=ಇರುವುದಿಲ್ಲ. ॥ ೨೨ ॥

ಸರ್ವಾಂಗ ಲಿಂಗಸ್ವರೂಪನಾದ, ಮೇ=ನನಗೆ, ಭೂಮಿಃ=ನೆಲವು, ಆಪಃ=ನೀರು, ವಹ್ನಿಃ=ಬೆಂಕಿಯು, ಅನಿಲ=ಗಾಳಿಯು, ಚ=ಮತ್ತು, ಅಂಬರಂ=ಆಕಾಶವೂ ಸಹ ಆಯಾ ಭೂತಗಳಿಗೆ ಆಶ್ರಯಗಳಾದ ಲಿಂಗ

ಗಳಲ್ಲಿ ವಿಲೀನವಾಗಿರುವುದರಿಂದ ನನಗಿಂತ ಅತಿರಿಕ್ತವಾಗಿ, ನಾಸ್ತಿ= ಇರುವುದಿಲ್ಲ.

ಏವಂ=ಹಿಂದೆ ಹೇಳಿದಂತೆ, ನಿಷ್ಕಲಂ=ಅವಿದ್ಯಾದಿ ಕಲಂಕರಹಿತವೂ, ಅದ್ವಿತೀಯಂ = ಎರಡನೆಯದಿಲ್ಲದುದೂ, ಗುಹಾಶಯಂ = ಪ್ರಾಣಿಗಳ ಹೃದಯಾಕಾಶದಲ್ಲಿ ಸನ್ನಿಹಿತವಾದುದೂ, ಸಮಸ್ತ ಸಾಕ್ಷಿಂ=ನಿಮಿತ್ತ ಕಾರಣವಾಗಿ ಜಗತ್ ಸಾಕ್ಷಿಯಾಗಿಯೂ, ಸದಸದ್ವಿಹೀನಂ=ಜಡ ಮತ್ತು ಅಜಡ ಪ್ರಪಂಚಶೂನ್ಯವೂ ಆದ ವಿಲಕ್ಷಣವಾದ, ಪರಮಾತ್ಮಾನಂ= ಪರವಸ್ತುವೆಂಬುದಾಗಿ, ವಿದಿತ್ವಾ=ಅನುಭವಮಾರ್ಗದಿಂದ ತಿಳಿದು, ಶುದ್ಧಂ=ನಿರ್ಮಲವಾದ, ಪರಮಾತ್ಮರೂಪಂ=ಅದೇ ಪರಶಿವಬ್ರಹ್ಮ ಸ್ವರೂಪವನ್ನೇ, ಪ್ರಯಾತಿ=ಅನೇಕ ನದಿಗಳು ತಮ್ಮ ನಾಮರೂಪಗಳನ್ನಳಿದು ಸಮುದ್ರದಲ್ಲಿ ವಿಲೀನವಾಗುವಂತೆ ಲಿಂಗಾಂಗಸಾಮರಸ್ಯ ಸುಖವನ್ನು ಅನುಭವಿಸುತ್ತಾನೆ. ॥ ೨೩, ೨೪ ॥

**ತಾತ್ಪರ್ಯ :**—ಇಲ್ಲಿಯೂ ಸಹ ದಹರೋಪಾಸನಾಸಕ್ತನಾದ ಶಿವಾದ್ವೈತಿಯು ಶಿವತ್ವಾಪತ್ತಿಗೆ ಕಾರಣವಾದ ಅನುಸಂಧಾನಶೀಲನಾಗಿರುವನೆಂಬುದನ್ನು ಅರಿಯಬಹುದಾಗಿದೆ. ವೇದವೇದ್ಯನಾದ ಆ ಪರವಸ್ತುವು ಸರ್ವಜ್ಞನಾದುದರಿಂದ ನಿಖಿಲ ವೇದವೇದಾಂತ ಕರ್ತೃವಾಗಿದ್ದಾನೆ. ಅಂದರೆ ಮಂತ್ರ ದ್ರಷ್ಟೃಗಳಾದ ಋಷಿಗಳ ಹೃದಯದಲ್ಲಿದ್ದು ತನ್ಮೂಲಕ ನಿಖಿಲ ಜ್ಞಾನಭಂಡಾರ (ವೇದಗಳನ್ನು)ವನ್ನೂ ಬಿತ್ತರಿಸಿದ್ದಾನೆ. 'ಅವನು ಸರ್ವವಿದ್ಯೆಗಳಿಗೂ ಒಡೆಯ'ನೆಂಬ ಅಂಶವನ್ನು '**ಶಾಸ್ತ್ರಯೋನಿತ್ವಾತ್**' ಎಂಬ ಸೂತ್ರದಲ್ಲಿ ಭಗವಂತನಾದ ಬಾದರಾಯಣನು ಪ್ರಕಾಶಪಡಿಸಿಯೇ ಇದ್ದಾನೆ. 'ಆತನು ಲೋಕಸೃಷ್ಟಿಕರ್ತೃವಾದ ಚತುರ್ಮುಖಾದಿಗಳಿಗೂ ಸಹ ಕಾರಣನು' 'ನಿಖಿಲ ವೇದಗಳೂ ಆ ಪರವಸ್ತುವಿನ ಉಚ್ಛ್ವಾಸ ನಿಶ್ವಾಸರೂಪಗಳೇ ಆಗಿವೆ'. ಎಂದರೆ ವೇದವು ಈಶ್ವರೀಯಜ್ಞಾನಕ್ಕೆ ಪ್ರಾಣಾನಿಲದಂತಿದೆಯೆಂದು ಪುರುಷಸೂಕ್ತ ಭಾಷ್ಯದಲ್ಲಿ ಉಕ್ತವಾಗಿದೆ.

ಇನ್ನು ಪರಮಪುರುಷತ್ವ ಸಿದ್ಧಿಗೆ ಮಾನವನಲ್ಲಿ ಪುಣ್ಯಪಾಪಗಳು ಯಾವುವೂ ಇರಬಾರದೆಂದು ಸಿದ್ಧಾಂತವಿದೆ. ಪುಣ್ಯವು ಸ್ವರ್ಗಾದಿ ಸುಖಗಳಿಗೆ ಕಾರಣವಾಗಿರುವಂತೆ ಪಾಪವು ನರಕಾದಿ ದುಃಖಗಳಿಗೆ ಕಾರಣ

ವಾಗಿದೆ. ಇವೆರಡೂ ಅನಿತ್ಯ. ಮಾನವನು ಪುಣ್ಯದಿಂದ ಸ್ವರ್ಗಾದಿಗಳನ್ನು ಪಡೆದರೂ, **'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'** ಎಂಬ ವಚನಾನುಸಾರವಾಗಿ ಪುಣ್ಯತೀರಿದಮೇಲೆ ಮತ್ತೆ ಮರ್ತ್ಯಲೋಕದಲ್ಲಿಯೇ ಅವತರಿಸಬೇಕಾಗುತ್ತದೆ. ಸ್ವರ್ಗಕ್ಕಾಗಲಿ ನರಕಕ್ಕಾಗಲಿ ಮರ್ತ್ಯಲೋಕ ದಿಂದಲೇ ಹೋಗಬೇಕು. ಇದು ಮಾನವನನ್ನು ಮಾನವತ್ವವನ್ನು ಇಲ್ಲವೆ ಮಾನವತ್ವದಿಂದ ದೇವತ್ವವನ್ನು ಸಾಧಿಸುವ ಕರ್ಮಶಾಲೆ (ಕಾರ್ಖಾನೆ) ಯೆನಿಸಿದೆ. ಇದನ್ನೇ ಮಹಾನುಭವಿ ಬಸವಣ್ಣನವರು **'ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯಾ! ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವ ರಯ್ಯಾ!'** ಎಂಬ ಅಮೃತ ವಾಕ್ಯವನ್ನು ನುಡಿದು ಮಾನವನು ಸತ್ಕರ್ಮ (ಕಾಯಕ)ನುಷ್ಠಾನದಿಂದ ಶಿವಕಾರುಣ್ಯಕ್ಕೆ ಪಾತ್ರನಾಗಬೇಕೆಂದು ಬೋಧಿ ಸಿದ್ದಾರೆ. ಆದುದರಿಂದ ಶಿವಾನುಭವಾನುಸಂಧಾನದಿಂದ ಲಿಂಗರೂಪಿ ಯಾದ ಸಾಧಕನಿಗೆ ಯಾವ ಪುಣ್ಯಪಾಪಗಳ ಲೇಪವೂ ಇರುವ ಕಾರಣವಿಲ್ಲ. ಇದನ್ನೇ **'ಅಪಾಪವಿದ್ಧಃ' 'ಪುಣ್ಯಪಾಪೇ ವಿಧೂಯ ಪರಾತ್ಪರಂ ಪುರುಷಮುಪೈತಿ'** ಎಂದು ಶ್ರುತಿಗಳು ಸ್ಪಷ್ಟಪಡಿಸಿವೆ. ಆದುದರಿಂದ ಅಂಥ ದಿವ್ಯಾತ್ಮವನ್ನು ತಳೆದ ಸಾಧಕನಿಗೆ ಜನನ, ಮರಣ ಪರಿವೆಯಿರು ವುದಿಲ್ಲ. ದೇಹ, ಇಂದ್ರಿಯ, ಬುದ್ಧಿ ಮುಂತಾದ ತಿಳಿವು ಅಳಿದು ಸರ್ವಾಂಗಲಿಂಗಮಯನಾಗಿರುವುದರಿಂದ ವಿಷಯಗಳೂ, ಅವುಗಳಿಗೆ ಆಶ್ರಯವಾದ ಪೃಥಿವ್ಯಾದಿ ಪಂಚಭೂತಗಳ ಗೋಜೂ ಅವನಿಗಿರುವುದಿಲ್ಲ. ಹೀಗೆಂದು ದೃಢಪ್ರಜ್ಞನಾಗಿ ಸಿದ್ಧಾವಸ್ಥೆಯನ್ನು ಪಡೆದ ಸಾಧಕನು ವಿದ್ಯಾದಿ ಕಲಾರಹಿತನೂ, ಅದ್ವಿತೀಯನೂ, ಪ್ರಾಣಿಗಳ ದಹರಾಕಾಶ ದಲ್ಲಿ ,ಅಂಗುಷ್ಠಮಾತ್ರ ಚೈತನ್ಯಮಯ ಜ್ಯೋತಿಸ್ಸ್ವರೂಪವಾಗಿ ಬೆಳಗು ವವನೂ, ಸಕಲ ಪ್ರಪಂಚಸಾಕ್ಷಿಯೂ, ಸಚ್ಚಿದಾನಂದ ನಿತ್ಯ ಪರಿಪೂರ್ಣ ಸ್ವರೂಪನೂ ಆಣವ ಕಾರ್ಮಿಕ ಮಾಯಾಮಲರಹಿತನಾದುದರಿಂದ ಪರಿ ಶುದ್ಧನೂ ಆದ ಪರಮಾತ್ಮಸ್ವರೂಪವನ್ನು ತಿಳಿದು, ಕಡೆಗೆ ನಾನಾ ನಾಮ ರೂಪು ಭೇದಗಳಿಂದ ಕೂಡಿರುವ ನದಿಗಳು ಸಮುದ್ರದಲ್ಲಿ ಸೇರಿ ತಮ್ಮ ಹಿಂದಿನ ನಾಮರೂಪುಗಳನ್ನಳಿದು ಕೇವಲ ಸಮುದ್ರವಾಗುವಂತೆ ಲಿಂಗಾಂಗ ಸಾಮರಸ್ಯವನ್ನು ಹೊಂದುತ್ತಾನೆ. ಇದನ್ನೇ **'ಯಥಾ ನದ್ಯಃ ಸ್ಯಂದ ಮಾನಾಃ'** ಇತ್ಯಾದಿ ಶ್ರುತಿಗಳು ಸಮರ್ಥಿಸುತ್ತವೆ.

# ಫಲಶ್ರುತಿಃ

## ಮೂಲ

ಯಶ್ಶತರುದ್ರೀಯಮಧೀತೇ ಸೋಽಗ್ನಿಪೂತೋ ಭವತಿ ಸ ವಾಯುಪೂತೋ ಭವತಿ, ಸ ಆತ್ಮಪೂತೋ ಭವತಿ, ಸ ಸುರಾಪಾನಾತ್ಪೂತೋ ಭವತಿ, ಸ ಬ್ರಹ್ಮಹತ್ಯಾಯಾಃ ಪೂತೋ ಭವತಿ, ಸ ಸುವರ್ಣಸ್ತೇಯಾತ್ಪೂತೋ ಭವತಿ, ಸ ಕೃತ್ಯಾಕೃತ್ಯಾತ್ಪೂತೋ ಭವತಿ ॥

ತಸ್ಮಾದವಿಮುಕ್ತಮಾಶ್ರಿತೋ ಭವತಿ । ಅತ್ಯಾಶ್ರಮೀ ಸರ್ವದಾ ಸಕೃದ್ವಾ ಜಪೇತ್ ॥

ಅನೇನ ಜ್ಞಾನಮಾಪ್ನೋತಿ ಸಂಸಾರಾರ್ಣವನಾಶನಮ್ । ತಸ್ಮಾದೇವಂ ವಿದಿತ್ವೈನಂ ಕೈವಲ್ಯಂ ಪದಮಶ್ನುತೇ ಕೈವಲ್ಯಂ ಪದಮಶ್ನುತೇ ॥ ೨೪ ॥

ಇತಿ ದ್ವಿತೀಯಃ ಖಂಡಃ .

**ಅರ್ಥ :—**ಯಃ ಅತ್ಯಾಶ್ರಮೀ=ಅತ್ಯಾಶ್ರಮಿಯೆಂದು ಹೇಳಲ್ಪಡುವ ಶಿರೋವ್ರತಿಯಾದ ಯಾವ ಮಹಾ ಪಾಶುಪತವ್ರತಶೀಲನಾದ ಶಿವಭಕ್ತನು, ಶತರುದ್ರೀಯಂ = ಮಂತ್ರಮಾತೆಯೆನಿಸಿರುವ ಶಿವಪಂಚಾಕ್ಷರೀ ಮಹಾಮಂತ್ರವನ್ನೊಳಗೊಂಡಿರುವ ರುದ್ರಾಧ್ಯಾಯವೆನ್ನು, ಅಧೀತೇ=ಲಿಂಗಾಭಿಷೇಕ ಕಾಲಗಳಲ್ಲಿ ಅಧ್ಯಯನ ಪಾರಾಯಣಾದಿಗಳನ್ನು ಮಾಡಿ (ಈ ಕೈವಲ್ಯೋಪನಿಷತ್ತನ್ನು ಪಠಿಸುವನೋ), ಸಃ=ಅವನು ಅಗ್ನಿಪೂತೋ ಭವತಿ=ಶಿವಜ್ಞಾನಾಗ್ನಿಯಿಂದ ಕರ್ಮನಿರ್ಲಿಪ್ತನಾಗುತ್ತಾನೆ. ಅಥವಾ ಜಠರಾಗ್ನಿ ಸಂಬಂಧದಿಂದುಂಟಾದ ಪಾಪ (ದೋಷ) ಗಳಿಂದ ಬಿಡುಗಡೆಹೊಂದಿ ಅಗ್ನಿಯಂತೆ ಪವಿತ್ರನೂ, ಅಗ್ನಿತತ್ತ್ವಕ್ಕೆ ಸಂಬಂಧಿಸಿದ ದೃಷ್ಟಿದೋಷಗಳಿಂದ ಮುಕ್ತನೂ ಆಗುತ್ತಾನೆ. ಸ ವಾಯುಪೂತೋ

ಭವತಿ=ಶಿವಮಂತ್ರ ಸ್ಮರಣೆಯಿಂದ ಅವನ ಶ್ವಾಸೋಚ್ಛ್ವಾಸಗಳು ಪರಿಶುದ್ಧವಾಗುವುದರಿಂದ ಪ್ರಾಣಾಪಾನಾದಿ ಪಂಚಪ್ರಾಣ ಕೃತದೋಷ ಗಳಿಂದಲೂ, ಅನಿಲತತ್ತ್ವಕ್ಕೆ ಸಂಬಂಧಿಸಿದ ಶರೀರಕೃತ ಪಾಪಗಳಿಂದಲೂ, ವಾಗಿಂದ್ರಿಯಕೃತವಾದ ದೋಷಗಳಿಂದಲೂ ಬಿಡುಗಡೆಹೊಂದಿ ಅನಿಲ ತತ್ತ್ವದಂತೆ ಪವಿತ್ರನಾಗುತ್ತಾನೆ. ಆತ್ಮಪೂತೋ ಭವತಿ=ಮನಸ್ಸು ಅಥವಾ ಆತ್ಮದಿಂದ ಸ್ವಸ್ವರೂಪ ಇಷ್ಟಲಿಂಗಾನುಸಂಧಾನ ಮಾಡುವುದ ರಿಂದ ಮನಸ್ಸು ಮತ್ತು ಜೀವಕೃತವಾದ ಪಾಪಗಳಿಂದ ವಿಮುಕ್ತನಾಗು ತ್ತಾನೆ.

ಹೀಗೆ ಕಾಯಿಕ ವಾಚಿಕ ಮಾನಸಿಕ ರೂಪವಾದ ತ್ರಿಕರಣ ಕೃತ ಪಾಪಗಳೂ ಸಹ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿ ಧರಿಸಿರುವ ಇಷ್ಟ ಪ್ರಾಣ ಭಾವಲಿಂಗಾನುಸಂಧಾನದಿಂದ ನಾಶವಾಗಿ ಹೋಗಿರುವುದರಿಂದ ಅವನಿಗೆ ಅಪೇಯಪಾನ, ಅಭಕ್ಷ್ಯಭಕ್ಷಣ, ಅಗಮ್ಯಗಮನ ರೂಪವಾದ ಯಾವ ದೋಷಗಳೂ ಅಂಟುವುದಿಲ್ಲವೆಂಬುದನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ.

ಸುರಾಪಾನಾತ್ಪೂತೋಭವತಿ=ಅಪೇಯಪಾನದಿಂದುಂಟಾದ ಮಹಾ ಪಾಪದಿಂದ ಬಿಡಲ್ಪಡುತ್ತಾನೆ. ಬ್ರಹ್ಮಹತ್ಯಾಯಾಃ ಪೂತೋ ಭವತಿ= ಬ್ರಹ್ಮಜ್ಞಾನಿಗಳಾದ ಮಹಾಪುರುಷವಧೆಯಿಂದುಂಟಾದ ಮಹಾ ಪಾತಕ ಗಳಿಂದ ಮುಕ್ತನಾಗುತ್ತಾನೆ. ಸುವರ್ಣಸ್ತೇಯಾತ್ ಪೂತೋ ಭವತಿ=ಚಿನ್ನ ಬೆಳ್ಳಿ ಮೊದಲಾದ ಬೆಲೆಯಾದ ವಸ್ತುಗಳನ್ನು ಕದಿಯುವುದರಿಂದುಂಟಾದ ದೋಷಗಳಿಂದ ಬಿಡಲ್ಪಡುತ್ತಾನೆ. ಕೃತ್ಯಾಕೃತ್ಯಾತ್ ಪೂತೋ ಭವತಿ= ಕಾರ್ಯ ಅಕಾರ್ಯಗಳನ್ನು ಮಾಡುವುದರಿಂದುಂಟಾದ ದೋಷಗಳಿಂದ ಮುಕ್ತನಾಗಿ ಪರಿಶುದ್ಧನಾಗುತ್ತಾನೆ. ತಸ್ಮಾತ್=ಆದುದರಿಂದ ಅತ್ಯಾಶ್ರಮಿ ಯಾದ **ಶಿರೋವ್ರತಿಯು** ಸರ್ವದಾ=ನಿರಂತರವೂ ಉಚಿತಕಾಲಗಳಲ್ಲಿ ವಾ=ಅಥವಾ, ಸಕೃತ್=ಒಮ್ಮೆ ವಾಚಿಕವಾಗಿಯಾದರೂ ರುದ್ರಾಧ್ಯಯನ ಪೂರ್ವಕ ಈ ಕೈವಲ್ಯೋಪನಿಷತ್ತನ್ನು ಜಪೇತ್=ಜಪಿಸಬೇಕು. ಹಾಗೆ ಜಪಿಸಿದ್ದೇ ಆದರೆ ಅವನು ಅವಿಮುಕ್ತಂ ಆಶ್ರಿತೋ ಭವತಿ='**ಅವಿಮುಕ್ತ**' ವೆಂಬ ಪರಶಿವಪದವಿಯನ್ನು ಹೊಂದುತ್ತಾನೆ. ಅಂಥವನು—

ಅನೇನ=ಈ ಕೈವಲ್ಯೋಪನಿಷತ್ತಿನ ಜಪದಿಂದ ಸಂಸಾರಾರ್ಣವ ನಾಶನಂ=ಸಂಸಾರಸಾಗರವನ್ನು ದಾಟಿಸುವ ಜ್ಞಾನಂ=ಪರಶಿವಬ್ರಹ್ಮ ಜ್ಞಾನವನ್ನು ಆಪ್ನೋತಿ=ಹೊಂದುತ್ತಾನೆ. ತಸ್ಮಾತ್=ಆದುದರಿಂದ ಏವಂ=ಇದುವರೆಗೆ ಹೇಳಿದ ರೀತಿಯಿಂದ ವಿದಿತ್ವಾ=ಅರಿತು ಏನಂ= ನಿಗಮಾಗಮಪ್ರಸಿದ್ಧವಾದ ಕೈವಲ್ಯಂ ಪದಂ=ಮುಕ್ತಿಯನ್ನು ಅಶ್ನುತೇ= ಹೊಂದುತ್ತಾನೆ. ದ್ವಿರುಕ್ತಿಯು ಉಪನಿಷತ್ಸಮಾಪ್ತಿಸೂಚನೆಗಾಗಿ ಪ್ರಯುಕ್ತವಾಗಿದೆ.

ಉಪಕ್ರಮ ಉಪಸಂಹಾರಗಳ ಸಂಬಂಧವಿರುವ ಕೃತಿ ಪರಿಪೂರ್ಣ ವೆನಿಸುತ್ತದೆ. ಈ ಉಪನಿಷತ್ತಿನ ಪ್ರಾರಂಭದಲ್ಲಿ (ಮಹೇಶಸ್ಥಳ) ದಹರೋಪಾಸನಾಶೀಲನಾದ ಶಿವಾದ್ವೈತಿಯ ಸಾಧನವಿಧಾನವು **'ವಿವಿಕ್ತ ದೇಶೇ'** ಎಂಬುದರಿಂದ ಆರಂಭವಾಗಿದೆ. ಅಲ್ಲಿ ಶಿವಾದ್ವೈತಸಾಧನಾ ರೂಪವಾದ ಬ್ರಹ್ಮವಿದ್ಯೆಗೆ ಅಧಿಕಾರಿಯನ್ನು ಹೇಳುವಾಗ **'ಅತ್ಯಾಶ್ರಮಸ್ಥಃ'** ಎಂದು ಋಷಿಯು ನಿರೂಪಿಸಿದ್ದಾನೆ. ಅತ್ಯಾಶ್ರಮಪದವು ವರ್ಣಕ್ಕೂ ಉಪಲಕ್ಷಿತವಾದ್ದರಿಂದ **'ಅತಿವರ್ಣಾಶ್ರಮ'** ವೆನಿಸುವ ವ್ರತವು **ಮಹಾಪಾಶುಪತವ್ರತ**ವೆಂದೂ, ತತ್ರಾಪಿ ವಿಧ್ಯುಕ್ತವಾಗಿ ಶಿವದೀಕ್ಷೆಯಿಂದ ಲಿಂಗಧಾರಣಮಾಡಿರುವಿಕೆಯೇ ಮಹಾಪಾಶುಪತವ್ರತ ವೆಂದೂ, ಇದೇ **'ಶಿರೋವ್ರತ'** ವೆಂದೂ ಮುಂಡಕಶ್ರುತಿ ಮುಂತಾದ ಅನೇಕ ಪ್ರಮಾಣಗಳಿಂದ ಹಿಂದೆಯೇ ಸಿದ್ಧಮಾಡಿದೆ. ಅಂಥ ವೀರಶೈವನು ಭಕ್ತಾದಿ ಐಕ್ಯಾಂತವಾದ ಷಟ್‌ಸ್ಥಳಗಳನ್ನು ಹೊಂದಿದ ತರುವಾಯ ಉದ್ದೇಶವನ್ನು ಉಪಸಂಹರಿಸುವ ಫಲಶ್ರುತಿಯಲ್ಲಿಯೂ ಸಹ ಮತ್ತೆ **'ಅತ್ಯಾಶ್ರಮಿ'** ಎಂದು ಕರೆದಿರುವುದು ಅತ್ಯಂತ ಸಮಂಜಸವೂ ಮಹತ್ವವೂ ಉಳ್ಳದ್ದಾಗಿದೆ. ಬ್ರಹ್ಮವಿದ್ಯೆಗೆ ಅಧಿಕಾರಿಯಾದ ಅತ್ಯಾ ಶ್ರಮಿಯೇ ಮುಕ್ತಿಭಾಜನನೆಂಬುದನ್ನು ಶ್ರುತಿದೇವಿಯು ಇದರಿಂದ ಸೂಚಿಸಿದ್ದಾಳೆ. ಇದನ್ನು ವ್ಯಾಖ್ಯಾನಕಾರರು ಅನೇಕ ಪ್ರಮಾಣ ಗಳನ್ನಿತ್ತು ವಿಸ್ತರಿಸಿದ್ದಾರೆ.

**"ಅತ್ಯಾಶ್ರಮಿ ನಿರಾಭಾರಃ ಷಟ್‌ಸ್ಥಲೀ ಜಂಗಮಶ್ಚರಃ । ಶಿವಯೋಗಯತಿರ್ವೀರೋ ನಾನ್ಯೇಷು ನ ಕದಾಚನ"** ಎಂಬ ವೀರಾ

ಗಮ ವಚನಾನುಸಾರವಾಗಿ **"ಅತ್ಯಾಶ್ರಮಿ"** ಎಂಬ ಶಬ್ದವು ಶಿವ ದೀಕ್ಷೆಯನ್ನು ಪಡೆದ ಬ್ರಹ್ಮಚರ್ಯಾದ್ಯಾಶ್ರಮಾವಲಂಬಿಗಳೆಲ್ಲರಿಗೂ ಅನ್ವಯಿಸುವುದಾದರೂ ಸಹ ಈಷಣಾತ್ರಯವನ್ನು ತ್ಯಜಿಸಿರುವ ನಿರಾಭಾರಿ (ಜಂಗಮ) ವೀರಶೈವನಿಗೆ ವಿಶೇಷತಃ ಅನ್ವಯಿಸುತ್ತದೆಯೆಂದು **"ಮೌನ ವದಿತರೇಷಾಮುಪ್ಯುಪದೇಶಾತ್"** (೩–೪–೧೪–೪೯) ಎಂಬ ಸೂತ್ರ ಭಾಷ್ಯದಲ್ಲಿ ಶ್ರೀಪತಿಪಂಡಿತರು ವಿಚಾರಮಾಡಿ ಕಡೆಗೆ ಬ್ರಹ್ಮವಿದ್ಯಾಧಿ ಕಾರವು ಎಲ್ಲ ಆಶ್ರಮಾಚರಣೆಯಲ್ಲಿರುವ ಶಿವದೀಕ್ಷಾಯುಕ್ತರಿಗೂ ಇರುವು ದೆಂದು ಸಿದ್ಧಾಂತಮಾಡಿರುತ್ತಾರೆ. ಆದರೂ ಬ್ರಹ್ಮಜಿಜ್ಞಾಸೆಗೆ ತಕ್ಕ ಅರ್ಹತೆ ಅಭ್ಯಾಸಗಳಿಲ್ಲದೆ ಅದು ಸಿದ್ಧಿಯಾಗದು. ಅದಕ್ಕಾಗಿ **'ಅನಾವಿಷ್ಕುರ್ವನ್ನನ್ವಯಾತ್'** (ಬ್ರ. ಸೂ. ೩. ೪. ೧೬. ೫೦) ಎಂಬ ಸೂತ್ರಭಾಷ್ಯದಲ್ಲಿ ಸಾಧಕನು ಭಕ್ತಿ, ಜ್ಞಾನ, ವೈರಾಗ್ಯ, ಶಮ, ದಮಾದಿ ಸದ್ಗುಣಗಳನ್ನು ಕೇವಲ ದಂಭಕ್ಕಾಗಿ ಆಚರಿಸದೆ ನಿರಂತರವೂ **ಶ್ರವಣ, ಮನನ, ನಿಧಿಧ್ಯಾಸ, ಧ್ಯಾನ, ಧಾರಣ, ಅವಧಾನ, ಸಮಾಧಿ** ಎಂಬ ಸಾಧನಗಳನ್ನು ಅನುಷ್ಠಾನಮಾಡುತ್ತಾ ಶಿವಜ್ಞಾನ ನಿಷ್ಠೆಯಲ್ಲಿ ಬಲ್ಲಿದನಾಗಿರಬೇಕೆಂದೂ, ಅವನು ಮಗುವಿನಂತೆ ಸರಲಸ್ವಭಾವಿಯಾಗಿರ ಬೇಕೆಂದೂ ನಿರೂಪಿಸಲಾಗಿದೆ. ಶರೀರೇಂದ್ರಿಯಾದಿಗಳ ಅಭಿಮಾನ ವನ್ನು ತ್ಯಜಿಸಿದ ಅಂತಹ ಶಿವಯೋಗಿಯ ಎಲ್ಲ ಮನೋವೃತ್ತಿಗಳೂ ಶಿವನಲ್ಲಿ ಕೇಂದ್ರೀಕೃತವಾಗಿರುತ್ತವೆ. ಇದನ್ನೇ, **'ಜ್ಯೋತಿರ್ಲಿಂಗಂ ಭ್ರುವೋರ್ಮಧ್ಯೇ ನಿತ್ಯಂ ಧ್ಯಾಯೇತ್ ಸದಾ ಯತಿಃ'** ಎಂದು ಹೇಳುತ್ತಾರೆ.

ಹೀಗೆ ಶಿವಜ್ಞಾನೈಕನಿಷ್ಠನಾದ ಶಿವಾದ್ವೈತಿಯ ಸಕಲ ಕರಣ ವೃತ್ತಿಗಳೂ ಶಿವಾತ್ಮಕವಾಗಿರುವುದರಿಂದ ಅವನು ಅಗ್ನಿ, ವಾಯು, ಜಲ ಮುಂತಾದ ಪಂಚಭೂತಗಳಿಂದ ಪರಿಶುದ್ಧನಾಗಿ ನಿರ್ಮಲಾಂತಃಕರಣ ನಾಗುತ್ತಾನೆ. ಆದುದರಿಂದಲೇ ಅವನು ಮಾಡುವ ಕಾರ್ಯಗಳು, ಸೇವಿಸುವ ವಸ್ತುಗಳು, ವಿಹರಿಸುವ ಸ್ಥಾನಗಳು ಇವೆಲ್ಲವೂ ಸಹ ಲಿಂಗಾ ರ್ಪಣ ಯೋಗ್ಯವಾದವುಗಳೇ ಆಗಿರುತ್ತವೆ; ಅಲ್ಲದೆ ಅವನು ಅನುಭವಿ ಸುವ ವಿಷಯಸುಖಗಳೆಲ್ಲ ಲಿಂಗಮುಖವಾಗಿ ಅರ್ಪಿತವಾಗಿ ಪ್ರಸಾದರೂಪ

ವಾಗಿರುವುದರಿಂದ ಅವನಲ್ಲಿ ಅಪೇಯಪಾನ, ಅಭಕ್ಷ್ಯಭಕ್ಷಣ, ಅಗಮ್ಯಗಮನ ಮುಂತಾದ ದೋಷಗಳಾವುವೂ ಇರುವುದೇ ಇಲ್ಲ.

ಒಂದುವೇಳೆ ಅವನು ಕರ್ಮವಶದಿಂದ ಅಂತಹ ಮಹಾಪಾತಕ ಉಪಪಾತಕಗಳನ್ನು ತಿಳಿದೊ ತಿಳಿಯದೆಯೋ ಮಾಡಿದ್ದರೂ ಸಹ ಸುಕೃತವಿಶೇಷದಿಂದ ಗುರುಕಾರುಣ್ಯಕ್ಕೆ ಪಾತ್ರನಾಗಿ ಶಿವದೀಕ್ಷೆಯನ್ನು ಪಡೆದು ಶತರುದ್ರೀಯಾಧ್ಯಯನಪೂರ್ವಕ ಕೈವಲ್ಯೋಪನಿಷತ್ತನ್ನು ಪಠನಮಾಡಲು ಉಜ್ಜುಗಿಸಿದ್ದೇ ಆದರೆ ಅವನೂ ಸಹ ಪರುಷಸೋಂಕಿದ ಕಬ್ಬುನದಂತೆ; ಸಜ್ಜನ ಸಹವಾಸದಿಂದ ದುರ್ಜನನೂ ಸತ್ಪುರುಷನಾಗುವಂತೆ ಪರಿಪೂತನಾಗುತ್ತಾನೆ. ಆದುದರಿಂದಲೇ ಭಗವದ್ಗೀತೆಯಲ್ಲಿ **"ಅಹಂ ತ್ವಾಂ ಸರ್ವಪಾಪೇಭ್ಯೋ ಮೋಚಯಿಷ್ಯಾಮಿ ಮಾ ಶುಚಃ"** ಎಂದು ಭರವಸೆ ಕೊಡಲಾಗಿದೆ. ಯತ್ಕಿಂಚಿತ್ ಪುಣ್ಯ (ಸುಕೃತ) ವಿಶೇಷವಿಲ್ಲದೆ ಅವನಿಗೆ ಇಂಥ ಪ್ರವೃತ್ತಿಯಲ್ಲಿ ಆಸಕ್ತಿ ಹುಟ್ಟುವುದೇ ಇಲ್ಲ. ಪಶ್ಚಾತ್ತಾಪಾಗ್ನಿಯಿಂದ ಧೂತಕಲ್ಮಷನಾದ ಧರ್ಮಾರ್ತನಾದ ಸಾಧಕನಿಗೆ ಶಿವಕಾರುಣ್ಯ ದೊರೆಯುವುದೇ ಶಿವಸಂಕಲ್ಪವಾಗಿದೆ.

**ವೀರಶೈವಧರ್ಮ ವಿಶ್ವಧರ್ಮ**—ಆದ್ದರಿಂದಲೇ ಯಾರುಬೇಕಾದರೂ ಈ ಧರ್ಮದಲ್ಲಿ ಸೇರಿ ಮುಕ್ತರಾಗಬಹುದೆಂಬುದಕ್ಕೆ ಅನೇಕ ಪ್ರಮಾಣಗಳಿವೆ. ಬ್ರಾಹ್ಮಣಾದಿ ಪ್ರಾಕೃತ ವರ್ಣಾಶ್ರಮಧರ್ಮದವರೂ ಕೂಡ ಷಟ್‌ಸ್ಥಳ ಬ್ರಹ್ಮನಿಷ್ಠನಾದ ಸದ್ಗುರುವನ್ನು ಹೊಂದಿ ೩-೬-೯-೧೨ ವರ್ಷ ಅಥವಾ ಗುರುಕಟಾಕ್ಷ ಆಗುವವರೆಗೆ ಸೇವೆಗೈದು ಶಿವದೀಕ್ಷಾ ಸಂಸ್ಕಾರದ ಮೂಲಕ ಮಹಾಪಾಶುಪತ ವ್ರತನಿಷ್ಠ ಅತಿವರ್ಣಾಶ್ರಮ ಧರ್ಮಿಗಳಾಗಿ ಮುಕ್ತರಾಗಲು ವೀರಶೈವ ಮತವು ಅವಕಾಶವಿತ್ತಿದೆ. ಇದರಿಂದ ವೀರಶೈವ ಮತವು ಸರ್ವಜನಶ್ರೇಯಃಪ್ರದವಾದ **ವಿಶ್ವಮತ**ವೆಂದು ಬೇರೆ ಹೇಳಬೇಕಾಗಿಲ್ಲ. ಆದುದರಿಂದಲೇ—

ವರ್ಷತ್ರಯಂ ಬ್ರಾಹ್ಮಣಂ ತು ಕ್ಷತ್ರಿಯಂ ವರ್ಷಷಟ್ಕ ಚ ।
ನವವರ್ಷಾತ್ ಪರಂ ವೈಶ್ಯಂ ಶೂದ್ರಂ ದ್ವಾದಶವರ್ಷಕಮ್ ॥
ಪರೀಕ್ಷ್ಯ ಬಹುಧಾ ಸಮ್ಯಕ್ ದೀಕ್ಷಯಾ ಯೋಜಯೇದ್ಗುರುಃ ॥

ವೀರಶೈವಾಚಾರಕೌಸ್ತುಭ—ಪುಟ ೧೬೭

" ಶ್ರೀ ಗುರುವಾದಾತನು ಸಕಲ ಮಂಗಳಹೃದಯವನರಿದು, ತನ್ನ ಆದಿಮಧ್ಯಾವಸಾನವಂ ತಿಳಿದು, ಸರ್ವಾಚಾರವು ತನ್ನಲ್ಲಿ ನೆಲೆಗೊಂಡು ಬ್ರಾಹ್ಮಣನಂ ಮೂರು ವರ್ಷ ನೋಡಬೇಕು, ಕ್ಷತ್ರಿಯನಂ ಆರು ವರ್ಷ ನೋಡಬೇಕು, ವೈಶ್ಯನಂ ಒಂಭತ್ತು ವರ್ಷ ನೋಡಬೇಕು, ಶೂದ್ರನಂ ಹನ್ನೆರಡು ವರ್ಷ ನೋಡಬೇಕು. ಅದೆಂತೆಂದೊಡೆ

ವೀರಾಗಮೇ—

ಬ್ರಾಹ್ಮಣಂ ತ್ರೀಣಿ ವರ್ಷಾಣಿ ಕ್ಷತ್ರಿಯಂ ವರ್ಷ ಷಟ್ಸು ಚ ।
ವೈಶ್ಯಂ ತು ನವವರ್ಷಾಣಿ ಶೂದ್ರಂ ದ್ವಾದಶವರ್ಷಕಮ್ ॥

ಇಂತೀ ಶ್ರುತ್ಯರ್ಥವನರಿಯದೆ ಉಪಾಧಿವಿಡಿದು ಉಪದೇಶವಂ ಮಾಡಿದಾತ ಗುರುವಲ್ಲ. ಉಪದೇಶವಿಡಿದು ಉಪಾಧಿಯಲ್ಲಿ ದೀಕ್ಷೆಯ ಕೊಂಬಾತ ಶಿಷ್ಯನಲ್ಲ. ಇವರಿಬ್ಬರ ನಿಲವು ಒಂದೇ, ಠಕ್ಕನ ಮನೆಗೆ ಠಕ್ಕ ಬಂದಂತೆ, ಆ ಗುರು ಶಿಷ್ಯರಿಬ್ಬರನ್ನು ರೌರವ ನರಕದಲ್ಲಿಕ್ಕುವ ನಮ್ಮ ಕೂಡಲ ಚೆನ್ನಸಂಗಮದೇವರು-"

ನ ವೀರಶೈವಸದೃಶಂ ಮತಮಸ್ತಿ ಜಗತ್ತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಮ್ ॥
ನ ವೀರಶೈವಾದಧಿಕಫಲದಂ ಮತಮಸ್ತಿ ಹಿ ।
ನ ವೀರಶೈವಾಚ್ಚ ಮತಂ ನಾಸ್ತಿ ಮುಕ್ತೇಃ ಪರಂ ಸುಖಮ್ ॥

(ಪಾರಮೇಶ್ವರತಂತ್ರ ಪಟಲ ೧–೧೦)

ಸಾಂಖ್ಯಯೋಗಸಹಸ್ರೇಣ ಜನ್ಮನಾದ್ವೈತಗೋ ಭವೇತ್ ।
ತನ್ಮತಸ್ಯ ಸಹಸ್ರೇಣ ಸೌರವಂ ಮತಮಶ್ನುತೇ ।
ತತ್ಸಹಸ್ರಸಮಾಭ್ಯಾಸಾದ್ಗಾಣಾಪತ್ಯಮತೋ ಭವೇತ್ ।
ತತ್ಸಹಸ್ರೇಣ ಭೂಲೋಕೇ ವೈಷ್ಣವಂ ಮತಮಿಾರ್ಯತೇ ।
ತದ್ವೈಷ್ಣವಸಹಸ್ರೇಣ ಶಾಕ್ತೋ ಭವತಿ ಸರ್ವದಾ ।
ತತ್ಸಹಸ್ರಾನ್ಮಹಾಭಾಗಶ್ಶೈವ ಸಾಮಾನ್ಯ ಉಚ್ಯತೇ ।
ತತ್ಸಹಸ್ರೇಣ ವಿಪ್ರೇಂದ್ರಾ ವೀರಶೈವಮತೋ ಭವೇತ್ ।
ತೇನೈವ ಮುಕ್ತಿಮಾಪ್ನೋತಿ ನಾನ್ಯಥಾ ಬಹುಯತ್ನತಃ ॥ (ಇತಿ ಸ್ಕಾಂದೇ)

(ಶ್ರೀಕರಭಾಷ್ಯ ಪುಟ ೧೪)

ಸನತ್ಕುಮಾರಪ್ರಮುಖಾ ಜ್ಞಾನನಿಷ್ಠಾ ಯಶಸ್ವಿನಃ ।
ಧೃತಲಿಂಗಾಂಗಭಾವಾಶ್ಚ ವಿರಾಜಂತೇಽನಿಶಂ ಮುದಾ ।
ಅಗಸ್ತ್ಯೋ ಜೈಮಿನಿಶ್ಚೈವ ವಿಶ್ವಾಮಿತ್ರೋಽಥ ಕಾಶ್ಯಪಃ ।
ಭರದ್ವಾಜೋಂಽಗಿರಾ ಅತ್ರಿರ್ವಸಿಷ್ಠೋ ರೋಮಹರ್ಷಣಃ ॥
ಏತೇ ಸರ್ವೇ ಮಹಾಭಾಗಾ ಅತಿವರ್ಣಾಶ್ರಮೇ ರತಾಃ ।

ವೀರಶೈವಾಸ್ಸಮಾಖ್ಯಾತಾ **ಜೀವನ್ಮುಕ್ತಾ** ನ ಸಂಶಯಃ ।
ಯೇಷಾಂ ತು ಜನ್ಮ ಚರಮಂ ತೇಷಾಮತ್ರ ಮತಿರ್ಭವೇತ್ ॥

(ಕ್ರಿಯಾಸಾರ–ಉಪದೇಶ ೧)

ಮತ್ತಮಾಪರಮೇಶ್ವರ ನಿರ್ಮಿತಮಾದ ಜಗತ್ತಿನಲ್ಲಿ ವೀರಶೈವ । **ಚರಮಶರೀರಿ** । ಸರ್ವೋತ್ತಮವ್ರತಿ । ಅಪ್ರತಿಹತ ಶಿವವ್ರತನು । ಲೋಕಪಾವನನೆಂದು ಸಮಸ್ತ ಸಜ್ಜನರಿಂ ಕೊಂಡಾಡಲ್ಪಟ್ಟು । ಸಮಸ್ತ ಶೈವರೊಳಗೆ ವರಿಷ್ಠನಾಗಿ । . . . . . . . . . . . . . . . . . . . . . . . . . . .
. . . . ಜಗತ್ಪೂಜ್ಯನಪ್ಪಾತನೇ ವೀರಶೈವನಪ್ಪಂ ॥

(ವಿವೇಕಚಿಂತಾಮಣಿ–ಪ್ರಕರಣ ೨)

ಎಂದು ಹೇಳಿದೆ.

ಹೀಗೆ ಶಿವಾಖ್ಯಪರಬ್ರಹ್ಮನಿಷ್ಠನಾದ ಪರಮೇಷ್ಠಿಯೆಂಬ ಸದ್ಗುರುವು ಆಶ್ವಲಾಯನನೆಂಬ ಸಚ್ಛಿಷ್ಯನಿಗೆ ಉಪದೇಶಮಾಡಿದ ಶಿವಾದ್ವೈತ ಸಿದ್ಧಾಂತ ಪರವಾದ ಕೈವಲ್ಯೋಪನಿಷತ್ತನ್ನು ತಿಳಿದುಕೊಂಡವನು ಸಂಸಾರವೆಂಬ ಭವಸಾಗರವನ್ನು ನಿರಾತಂಕವಾಗಿ ದಾಟಿ ನಿರತಿಶಯಾನಂದಾಮೃತ ಸ್ವರೂಪವಾದ **'ಕೈವಲ್ಯಪದವಿಯನ್ನು ಹೊಂದುವನು' 'ಕೈವಲ್ಯಪದವಿಯನ್ನು ಹೊಂದುವನು'** ಎಂದು ಎರಡುಸಾರಿ ಹೇಳಿ ಉಪನಿಷತ್ತು ಸಮಾಪ್ತವಾಗಿದೆ. ॥ ೨೫ ॥

ಉಪನಿಷತ್ಪರಿಸಮಾಪ್ತಿ ಸೂಚನೆಗಾಗಿ **'ಸಹ ನಾವವತು'** ಎಂಬ ಶಾಂತಿಮಂತ್ರವನ್ನು ಮತ್ತೆ ಪಠಿಸಲಾಗಿದೆ.

ಇಂತು ಸಖರಾಯಪಟ್ಟಣದ ಹಾಲುಸ್ವಾಮಿ ಮಠದ ಪಟ್ಟಾಧ್ಯಕ್ಷರಾದ
ಶ್ರೀ॥ ಷ॥ ಬ್ರ॥ ಶ್ರೀ॥ **ಸದಾಶಿವ ಶಿವಾಚಾರ್ಯ** ವಿರಚಿತ ಶಿವಾದ್ವೈತ ಸಿದ್ಧಾಂತ
ಪರವಾದ ಕೈವಲ್ಯೋಪನಿಷತ್ತಿನ ಸಾದಾಶಿವಭಾಷ್ಯದ ಎರಡನೆಯ
ಖಂಡಕ್ಕೆ **ಶಿವಾದ್ವೈತ ವಿದ್ಯಾಭೂಷಣ ಆಸ್ಥಾನ ವಿದ್ವಾನ್**
**ಮ. ಗಂ. ನಂಜುಂಡಾರಾಧ್ಯ**ರಿಂದ ರಚಿತವಾದ
**'ಭಾವಪ್ರಕಾಶ'**ವೆಂಬ ಕನ್ನಡ
ತಾತ್ಪರ್ಯವು ಮುಗಿದುದು

---

1045–49. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# परिशिष्टम् १

## कैवल्योपनिषत् सादाशिवभाष्ये उदाहृतानां प्राचीनग्रन्थानां अनुक्रमणिका

# पण्डितप्रवराणामभिप्रायाः

१

## आस्थानविद्वान् के. पि. नारायणशास्त्री

अद्वैतवेदान्त प्रोफ़ेसर्, श्रीचामराजेन्द्रसंस्कृतकालेज्

बेङ्गळूर

भाष्यमिदं साद्यन्तमापादचूडमस्माभिर्दृष्टिकर्मीकृतम् । वीरशैवसिद्धान्तानुयायिनां सर्वेषां अत्यन्तमानुकूल्यसम्पादनद्वारा पठनपाठनादौ बहूपकारकमित्यत्र न कापि संशीतिः । शिवाद्वैत-सिद्धान्तात्मकस्य भाष्यस्यास्मदन्तेवासिना आस्थानविदुषा नञ्जुण्डाराध्येनकृता कर्णाटभाषामयी भावप्रकाशाख्यव्याख्यापि तत्सिद्धान्त रहस्यार्थगर्भीकृता गीर्वाणभाषानभिज्ञजनानामत्यन्तोपकारिणी शक्तिविशिष्टाद्वैतमततत्त्वजिज्ञासूनामनायासेनाखिलतत्त्वावबोधिनीत्यतस्सर्वेऽपि ग्रन्थस्यास्य पठनपाठनादिना तदीयमायासं सफलीकुर्वन्त्वित्यभ्यर्थये ।

सहृदयजनविधेयः

दिनाङ्कः ३०–३–१९५०

के. पि. नारायणशास्त्री

## आस्थान विद्वान् प्रो. के. कृष्णशास्त्री

व्याकरणप्रधानोपाध्यायः, श्रीचामराजेन्द्रसंस्कृतकालेज्
बेङ्गलूर

सादाशिवं भाष्यमिदमान्तमवलोकितमस्माभिः । उपनिषदश्च सर्वास्सर्वश्रेयोमार्गनिदानभूता इत्यत्र न कापि विमतिः कस्यचिदपि सचेतसः । सर्वाण्यपि भाष्याणि तत्तदाचार्यवर्यैः तत्तन्मतसिद्धान्तप्रचिकटयिषया विरचय्य प्रसिद्धिं नीतानि लोके सर्वत्र दरीदृश्यन्ते । प्रकृते कैवल्योपनिषदः शक्तिविशिष्टाद्वैतमतानुसारीदं सदाशिवशिवाचार्यविरचितं भाष्यं वीरशैवसिद्धान्तं करतलामलकवदखिलमनोरञ्जकतया समर्पयत् निगमागमप्रमाणवचननिकुरुम्बैरुपबृंहितं सत् महाजनैरत्यन्तसमादरणीयताकोटिमाटीकते इति दृढतरं विश्वसिमः ।

अस्य च भाष्यस्य भावप्रकाशाख्यसुललितकर्णाटभाषामयव्याख्यापि श्रीचामराजेन्द्रसंस्कृतमहापाठशालाविद्योतितशक्तिविशिष्टाद्वैत सहायोपाध्यायेन, शिवाद्वैतविद्याभूषणबिरुदभाजा आस्थानविदुषा एम्. जि. नञ्जुण्डाराध्याभिधेन विरचिता बहुप्रमाणवचनप्रसञ्चिता वीरशैवसिद्धान्तरहस्यार्थप्रकाशिनी सती गीर्वाणभाषानभिज्ञजनमनोविनोदकारितयात्यन्तोपयुक्तेति महानस्माकमानन्द इति सहृदयजनतायाः पुरतस्सामोदमावेद्यतेऽस्माभिः । अपि चानयोर्ग्रन्थकारयोरायासः पठनपाठनादिद्वारा सर्वैस्सफलीकरणीय इति चाभ्यर्थये ।

२५-३-१९५०
बेङ्गलूर सिटि

के. कृष्णशास्त्री

# ಅಭಿಪ್ರಾಯಗಳು

೩

ಉಪನಿಷತ್ತುಗಳು ವೈದಿಕಕಾಲದ ಭಾರತೀಯ ಋಷಿಗಳ ಅಗಾಧವಾದ ಜ್ಞಾನಸಂಪತ್ತಿಯ ಭಾಂಡಾಗಾರವಾಗಿರುವವು. ಎಲ್ಲ ದಾರ್ಶನಿಕ ವಿಚಾರ ವಾಹಿನಿಗಳ ಉಗಮಸ್ಥಾನಗಳೂ ಅವೇ! ಭಾರತೀಯ ತತ್ತ್ವವೇತ್ತರು ಉಪನಿಷತ್ತುಗಳನ್ನು ಅಪೌರುಷೇಯಗಳೆಂದೇ ಹೇಳುತ್ತ ಬಂದಿದ್ದಾರೆ. ಅವರ ಮಾತು ಸತ್ಯವಾಗಿರುವದರಲ್ಲೇನೂ ಸಂದೇಹವಿಲ್ಲ. ಏಕೆಂದರೆ ಆಧ್ಯಾತ್ಮಿಕ ಜ್ಞಾನದ ಮಹತ್ವಾತಿಶಯದಿಂದ ಸಂಕುಚಿತವಾದ ಪುರುಷತ್ವಾಭಿಮಾನವು ನಷ್ಟವಾಗಿ ಸರ್ವಾತ್ಮ(ದೇವ) ಭಾವದಲ್ಲಿ ನಿಂತುಕೊಂಡ ಋಷಿಗಳ ಶುದ್ಧವಾದ ಹೃದಯದಲ್ಲಿ ಹುಟ್ಟಿ ಅವರ ಮುಖದಿಂದ ಹೊರಸೂಸಿ ಬಂದ ಅನುಭವ ಮಾತುಗಳು ಅಪೌರುಷೇಯಗಳಾಗದೇನು! "ಉಪನಿಷತ್ತುಗಳು ಯಾರ ಬುದ್ಧಿಯಿಂದ ಹೊರಟು ಬಂದಿರುವವೋ ಅವರನ್ನು ಮನುಷ್ಯ ಕೋಟಿಯಲ್ಲಿ ಗಣನೆಮಾಡುವದು ಸಾಧ್ಯವಿಲ್ಲ" ಎಂಬ ಜರ್ಮನ್ ದೇಶದ ಪಂಡಿತನಾದ ಶೋಪನಹಾರನ ವಚನವು ಮೇಲಿನ ಮಾತನ್ನು ಪೂರ್ಣವಾಗಿ ಸಮರ್ಥಿಸುತ್ತದೆ.

ಉಪನಿಷತ್ತುಗಳು ಅನೇಕ ನಿಗೂಢ ತತ್ತ್ವಗಳಿಂದ ತುಂಬಿಕೊಂಡಿರುವವು. ಆದು ನಿಮಿತ್ತವಾಗಿಯೇ ಅವು ತತ್ತ್ವಬುಭುತ್ಸುಗಳಿಗೆಲ್ಲಾ ಮಾನ್ಯವಾಗಿವೆ. ಉಪನಿಷತ್ತುಗಳ ಆಳವಾದ ಅಭ್ಯಾಸದಿಂದ ಸಂತುಷ್ಟನಾದ ಶೋಪನಹಾರನು, "ಮಾನವ ಜೀವನವನ್ನು ಉನ್ನತ ಮಟ್ಟಕ್ಕೇರಿಸಲಿಕ್ಕೆ ಉಪನಿಷತ್ತುಗಳಿಗಿಂತ ಸಮರ್ಥಗಳಾದ ಬೇರೆ ಯಾವ ಗ್ರಂಥಗಳೂ ಇಲ್ಲಿಯವರೆಗೆ ನನ್ನ ದೃಷ್ಟಿಗೆ ಬಿದ್ದಿಲ್ಲ. ಮೃತ್ಯುಕಾಲದಲ್ಲಿಯೂ ಶಾಂತನಾಗಿರಬಲ್ಲ ಯೋಗ್ಯತೆಯು ನನಗೆ ಬಂದದ್ದು ಉಪನಿಷತ್ತುಗಳ ಅಧ್ಯಯನದಿಂದಲೇ!" ಎಂದು ಉದ್ಗಾರ ತೆಗೆದಿರುವನು. ಇದರ ಮೇಲಿಂದ ಉಪನಿಷತ್ತುಗಳ ಪ್ರಭಾವವು ಎಷ್ಟು ಮಹತ್ವದ್ದೆಂಬುವದು ಬುದ್ಧಿವಂತರಿಗೆ ಗೋಚರವಾಗದಿರದು.

ಉಪನಿಷತ್ತುಗಳ ನಿರ್ದಿಷ್ಟಸಂಖ್ಯೆಯು ಇಲ್ಲಿಯವರೆಗೆ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಈಗ ೨೨೦ ಉಪನಿಷತ್ತುಗಳು ಉಪಲಬ್ಧವಾಗಿರುವವು.

ಮುಕ್ತಿಕೋಪನಿಷತ್ತಿನಲ್ಲಿ ೧೦೮ ಉಪನಿಷತ್ತುಗಳು ಮುಖ್ಯವಾಗಿರುವ ವೆಂದು ಹೇಳಲಾಗಿದೆ. ಕೆಲವು ಉಪನಿಷತ್ತುಗಳು ಕಾಲಾಂತರದಲ್ಲಿ ಬರೆಯಲ್ಪಟ್ಟವೆಯೆಂದೂ ತಿಳಿದು ಬರುತ್ತದೆ.

ನೂರೆಂಟು ಉಪನಿಷತ್ತುಗಳಲ್ಲಿ ಕೈವಲ್ಯೋಪನಿಷತ್ತು ಒಂದು ಮಹತ್ವಸ್ಥಾನ ಪಡೆದಿರುವದು. ಇದರಲ್ಲಿ ಆತ್ಮಸ್ವರೂಪ ಮತ್ತು ಅದನ್ನು ತಿಳಿಯುವ ಉಪಾಯ ಇವು ಆಶ್ವಲಾಯನ ಪ್ರಜಾಪತಿ ಸಂವಾದರೂಪದಲ್ಲಿ ಸುಬೋಧವಾಗಿ ಪ್ರತಿಪಾದಿತಗಳಾಗಿವೆ. ಶಂಕರಾಚಾರ್ಯ ಮುಂತಾದವರು ಈಶ. ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ ಮತ್ತು ನೃಸಿಂಹಪೂರ್ವತಾಪಸೀ ಈ ಉಪನಿಷತ್ತುಗಳ ಮೇಲೆಯೇ ಹೆಚ್ಚು ಕಡಿಮೆ ಯಾಗಿ ಭಾಷ್ಯ, ಹಾಗೂ ವ್ಯಾಖ್ಯಾನಗಳನ್ನು ಬರೆದಿರುವರು. ಈ ಉಪನಿಷತ್ತುಗಳು ಬಹು ಪ್ರಾಚೀನವಾದವೆಂದು ಪಂಡಿತರ ಅಭಿಪ್ರಾಯವುಂಟು.

ಉಪನಿಷತ್ತುಗಳಲ್ಲಿ ಅನೇಕ ತತ್ವಬೀಜಗಳು ಹುದುಗಿಕೊಂಡಿವೆ. ಅದು ಕಾರಣವಾಗಿಯೇ ಆಯಾ ಸಿದ್ಧಾಂತಕಾರರು ತಮ್ಮ ತಮ್ಮ ಬುದ್ಧಿ ವೈಭವದಿಂದ ಆಯಾ ತತ್ವಬೀಜಗಳನ್ನು ಆರಳಿಸಿ ಸಿದ್ಧಾಂತರೂಪದಲ್ಲಿ ಪ್ರಸಿದ್ಧಿಗೊಳಿಸಿರುವರು. ಶಂಕರ, ರಾಮಾನುಜ, ಮಧ್ವ, ವಲ್ಲಭ, ನಿಂಬಾರ್ಕ ಮುಂತಾದವರು ಕ್ರಮವಾಗಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಶುದ್ಧಾದ್ವೈತ, ದ್ವೈತಾದ್ವೈತ ಮೊದಲಾದ ಸಿದ್ಧಾಂತಗಳನ್ನು ಸ್ಥಾಪಿಸಿರುವದು ಎಲ್ಲ ವಿದ್ಯಾವಂತರಿಗೂ ತಿಳಿದ ಸಂಗತಿಯೇ ಆಗಿದೆ. ಇರಲಿ.

ಈಗ ಕೈವಲ್ಯೋಪನಿಷತ್ತಿನ ಮೇಲೆ ಶಕ್ತಿ ವಿಶಿಷ್ಟಾದ್ವೈತ ಪರವಾಗಿ ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರು ಭಾಷ್ಯ ಬರೆದಿರುವದನ್ನು ನೋಡಿ ನಮಗೆ ತುಂಬಾ ಸಂತೋಷವಾಗಿದೆ. ಪಟ್ಟಾಧ್ಯಕ್ಷರು ಆಚಾರ ವಿಚಾರ ಸಂಪನ್ನರಾಗಿದ್ದು ಯಾವಾಗಲೂ ತಮ್ಮ ಆಶ್ರಮಕ್ಕೆ ತಕ್ಕ ಕಾರ್ಯಗಳನ್ನು ಮಾಡುವದರಲ್ಲಿಯೇ ತೊಡಗಿರುವದು ಇತರ ಮಠಾಧಿಕಾರಿಗಳಿಗೂ ಆದರ್ಶವಾಗಿರುವದು. ಆಸ್ಥಾನ ವಿದ್ವಾನ್

ಪಂಡಿತ ನಂಜುಂಡಾರಾಧ್ಯರು ಭಾಷ್ಯವನ್ನು ಕನ್ನಡದಲ್ಲಿ ಅನುವಾದಮಾಡಿ ಕನ್ನಡಿಗರಿಗೆಲ್ಲಾ ಪರಮೋಪಕಾರ ಮಾಡಿದ್ದಾರೆ. ಈ ಉಭಯರ ಪರಿಶ್ರಮವನ್ನು ಕನ್ನಡ ಬಂಧುಗಳು ಮತ್ತು ಇತರ ತತ್ವಬುಭುತ್ಸುಗಳು ಮನದಂದು ಅವರ ಉಪಕೃತಿಯನ್ನು ತೀರಿಸಲು ಮುಂದೆ ಬರಬೇಕಾಗಿ ನಮ್ಮ ಪ್ರಾರ್ಥನೆ.

**ಪಂಡಿತ ನಾಗಭೂಷಣ ಶಾಸ್ತ್ರಿಗಳು**
ಅಖಿಲ ಭಾರತ ವೀರಶೈವ ವಿದ್ಯಾಪೀಠದ ಕಾರ್ಯಾಧ್ಯಕ್ಷರು
ಮತ್ತು
'ಸಾವಧಾನ' ಸಂಪಾದಕರು, ಗದಗ.

---

೪

'ವೀರಶೈವವು ವಿಶ್ವಮಾನ್ಯವು' ಎಂಬುದನ್ನು ಸಾರಬಹುದಾದ ಮೂರು ಮುಖ್ಯ ವಿಷಯಗಳು ವೀರಶೈವ ಮತದಲ್ಲಿರುವವು. ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲವೆಂಬವುಗಳೇ ಅವು.

ಪಂಚಾಚಾರಗಳಲ್ಲಿ ವೀರಶೈವರ ಜಗನ್ಮಾನ್ಯ ನೀತಿ ಪ್ರತಿಪಾದನೆಯಿದೆ. ಅಷ್ಟಾವರಣದಲ್ಲಿ ಸರ್ವಾಂಗ ಸುಂದರ ಸಮಾಜ ರಚನೆಯ ವೈಶಿಷ್ಟ್ಯವಿದೆ. ಷಟ್‌ಸ್ಥಲದಲ್ಲಿ ತತ್ವಶಾಸ್ತ್ರ ಸಿದ್ಧಾಂತವಿರುವುದು.

ಭಾರತೀಯ ತತ್ವಶಾಸ್ತ್ರಗಳಲ್ಲಿ ಸಾಮಾನ್ಯವಾಗಿ ಬಂಧ, ಬಂಧ ಕಾರಣ, ಮೋಕ್ಷ, ಮೋಕ್ಷೋಪಾಯವೆಂಬ ಚತುರ್ವ್ಯೂಹದ ಪ್ರತಿಪಾದನೆ, ಅಥವಾ ಜೀವ, ಜಗತ್ತು, ದೇವರು, ಇವರ ಸ್ವರೂಪ, ಪರಸ್ಪರ ಸಂಬಂಧ, ಜೀವನು ದೇವರಾಗುವ ಉಪಾಯ ಇವುಗಳ ತಾತ್ವಿಕ ವಿವೇಚನೆ ಇರುವುದುಂಟು.

ವೀರಶೈವ ದೃಷ್ಟಿಯಿಂದ—ಆತ್ಮನು ಜೀವಭಾವದಿಂದ ಶಬ್ದಾದಿ ವಿಷಯಗಳನ್ನು ವಿಷಯರೂಪದಿಂದ ಭೋಗಿಸುವುದೇ ದುಃಖರೂಪವಾದ ಬಂಧವು. ಈ ವಿಷಯಗಳನ್ನು ನಾನು ಪಡೆದಿರುವೆನು. ಇವು ನನ್ನವು ಎಂಬ

ಅಹಂಕಾರ ಮಮಕಾರಾತ್ಮಕವಾದ ತಪ್ಪು ತಿಳುವಳಿಕೆ (ಅಜ್ಞಾನ)ಯೇ **ಬಂಧಕಾರಣ.** ಇನ್ನು ಜೀವನು ಶಿವನಾಗಿ ವಿಷಯಗಳನ್ನು ಶಿವಪ್ರಸಾದ ರೂಪದಿಂದ ಭೋಗಿಸುತ್ತ ನಿತ್ಯತೃಪ್ತನಾಗಿರುವುದೇ **ಮೋಕ್ಷವು.** ಜೀವ ಶಿವರ (ಅಂಗಲಿಂಗಗಳ) ಸಂಬಂಧವನ್ನುಂಟುಮಾಡುವ ಗುರುಕೃಪಾಲಬ್ಧ ಶಿವದೀಕ್ಷೆಯೇ ಮೋಕ್ಷಕ್ಕೆ **ಮುಖ್ಯೋಪಾಯವು;** ಜ್ಞಾನ, ಕ್ರಿಯೆ, ಉಪಾಸನಕ್ರಮ, ಶಾಸ್ತ್ರಬೋಧೆ ಮೊದಲಾದ ಇನ್ನಿತರ ಮೋಕ್ಷೋಪಾಯಗಳು ದೀಕ್ಷಾಂಗವಾಗಿಯೇ ಲಬ್ಧವಾಗುವವು. ಇವುಗಳ ತಾತ್ವಿಕ ವಿವೇಚನೆಯು ಷಟ್‌ಸ್ಥಲ ಸಿದ್ಧಾಂತದಲ್ಲಿ ಹೃದಯಂಗಮವಾಗಿ ಒಡಮೂಡಿರುವುದು. ಇಷ್ಟೇ ಅಲ್ಲ, ಶಿವಜೀವರ ಸ್ವರೂಪ ಸಂಬಂಧಾದಿಗಳೂ, ಜಗತ್ತೆಂಬುದು ಜೀವನಿಗೆ ಶಿವಕೃಪಾಲಬ್ಧ ಪ್ರಸಾದವಾಗಿರುವುದೆಂಬುದೂ ಆ ಸಿದ್ಧಾಂತದಲ್ಲಿ ಸಮರ್ಪಕವಾಗಿ ನಿರೂಪಿತವಾಗಿದೆ. ಆದ್ದರಿಂದ ಷಟ್‌ಸ್ಥಲ ಸಿದ್ಧಾಂತವು ವೀರಶೈವ ತತ್ವಶಾಸ್ತ್ರವೆಂಬುದು ನಿರ್ವಿವಾದ.

ತತ್ವಶಾಸ್ತ್ರಗಳ ಪ್ರಮಾಣವಾದ—ಪ್ರತ್ಯಕ್ಷ, ಅನುಮಾನ, ಶಬ್ದ ಇವು ಮೂರು ಭಾರತೀಯ ತತ್ವ ಸಿದ್ಧಾಂತದಲ್ಲಿ ಮುಖ್ಯ ಪ್ರಮಾಣಗಳು. ಉಪಮಿತಿ ಮೊದಲಾದ ಇನ್ನಿತರ ಪ್ರಮಾಣಗಳು ಈ ಮೂರರಲ್ಲಿಯೇ ಅಂತರ್ಗತವಾಗುವವು. ಮೂರರಲ್ಲಿ ಶಬ್ದಪ್ರಮಾಣದ ವಿಷಯವಾಗಿಯೇ ಶಾಸ್ತ್ರಗಳಲ್ಲಿ ವಿಶೇಷವಾದವಿರುವುದು. ಆಪ್ತವಾಕ್ಯಗಳೇ ಶಬ್ದ ಪ್ರಮಾಣಗಳು. ಇಲ್ಲಿ ಆಪ್ತ ಪದಕ್ಕೆ ಅನಾದಿಮುಕ್ತನಾದ ಪರಶಿವನೂ, ಪರಶಿವ ಸಾಕ್ಷಾತ್ಕಾರವನ್ನು ಪಡೆದ ಆದಿಮುಕ್ತರಾದ ಋಷಿ ಪ್ರಮಥಾದಿಗಳೂ ವಾಚ್ಯರಾಗುವರು. ವೇದಾಗಮಗಳು ಪರಶಿವಲಬ್ಧವಾದವುಗಳು. ಇನ್ನುಳಿದವರಿಂದ ರಚಿತವಾದವುಗಳೇ ಸ್ಮೃತಿಗಳು ಎಂಬುದೇ ವೀರಶೈವ ಶಾಸ್ತ್ರಕಾರರ ನಿರ್ಣಯವು.

ಸಖರಾಯಪಟ್ಟಣದ ಹಾಲುಸ್ವಾಮಿ ಮಠಾಧ್ಯಕ್ಷರಾದ ಶ್ರೀ॥ ಷ॥ ಬ್ರ॥ ಶ್ರೀ॥ ಸದಾಶಿವ ಶಿವಾಚಾರ್ಯರು ಷಟ್‌ಸ್ಥಲ ಸಿದ್ಧಾಂತವು ಉಪನಿಷನ್ಮತ ಸಮ್ಮತವೆಂಬುದನ್ನು ತಮ್ಮ ಕೈವಲ್ಯೋಪನಿಷತ್ತಿನ ಭಾಷ್ಯದಲ್ಲಿ ಸುಸಂಸ್ಕೃತ ಪ್ರಸಾದವಾಣಿಯಿಂದ ನಿರ್ಣಯಿಸಿರುವರು.

ಈ ನಿರ್ಣಯವನ್ನು ಪುಷ್ಟೀಕರಿಸುವ ಅನೇಕ ವೇದಾಗಮ ಸ್ಮೃತಿ ಪ್ರಮಾಣಗಳು ಭಾಷ್ಯದಲ್ಲಿ ಕಂಗೊಳಿಸುವವು. ಶ್ರೀಗಳ ಗುರುಕರ್ತವ್ಯ ರೂಪವಾದೀ ಭಾಷ್ಯರಚನೆಯು ಅವರ ಶಿವಾಚಾರ್ಯ ಪದವಿಯನ್ನು ಸಾರ್ಥಕಪಡಿಸಿ, ವೀರಶೈವ ಗುರುವರ್ಗಕ್ಕೆ ಮಾರ್ಗದರ್ಶಕವಾಗಿರುವುದು. ಪೂಜ್ಯಪಾದರು ಇದರಂತೆ ಇನ್ನಿತರ ಉಪನಿಷತ್ತುಗಳಿಗೂ ವೀರಶೈವ ಪರಭಾಷ್ಯಾದಿಗಳನ್ನು ರಚಿಸಿ, ಸಮಾಜವನ್ನುದ್ಧರಿಸುವ ಸ್ವಕಾಯಕದಲ್ಲಿ ನಿರತರಾಗಲೆಂದು ನನ್ನ ಹಾರೈಕೆ.

ಭಾವಪ್ರಕಾಶ–ಶಿವಾದ್ವೈತ ವಿದ್ಯಾಭೂಷಣ ಆಸ್ಥಾನ ವಿದ್ವಾನ್ ಮ. ಗಂ. ನಂಜುಂಡಾರಾಧ್ಯರು ಭಾಷ್ಯಾರ್ಥದ ಭಾವವನ್ನು ಪ್ರಕಾಶಿಸುವ ತಮ್ಮ 'ಭಾವಪ್ರಕಾಶ'ವೆಂಬ ಹೆಸರಿನ ವಿಮರ್ಶಾತ್ಮಕ ತಾತ್ಪರ್ಯವನ್ನು ಸರಳವಾದ ನಲ್ಗನ್ನಡದಲ್ಲಿ ವಿದ್ವತ್ಪೂರ್ಣವಾದ ಶೈಲಿಯಿಂದ ರ[illegible] ವೀರಶೈವರಿಗೆ ಇಷ್ಟೇ ಅಲ್ಲ, ಸರ್ವ ಕನ್ನಡಿಗರಿಗೂ ಸ್ತುತ್ಯರಾಗಿರುವರು. ಉತ್ಸಾಹಿಗಳಾದೀ ತರುಣಪಂಡಿತರ ಗ್ರಂಥರಚನಾಕಾರ್ಯವು ಇತೋಽಪ್ಯತಿಶಯವಾಗಿ ನಡೆದು ಇವರ ಪ್ರತಿಭಾಶಕ್ತಿಯ ವಿಕಾಸಕ್ಕೆ ಮುಖ್ಯ ಸಾಧನವಾಗಿ ಪರಿಣಮಿಸಲೆಂದು ಕೋರುವೆನು.

ಬಳ್ಳಾರಿ
ತಾ॥ ೧೫–೬–೧೯೫೦

ವೈ. ನಾಗೇಶ ಶಾಸ್ತ್ರೀ
ಸರ್ವದರ್ಶನತೀರ್ಥ
ಪ್ರಧಾನ ಕನ್ನಡ ಪಂಡಿತರು, ವೀರಶೈವ ಕಾಲೇಜು

1041–49. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿದುದು.

# ಭಾಷ್ಯಕಾರರ ಇತರ ಗ್ರಂಥಗಳು

ಸಂಕ್ಷಿಪ್ತ ಶಿವಪೂಜಾವಿಧಿ
ವಿಶೇಷ ಶಿವಪೂಜಾವಿಧಿ
ಪಶು ಮತ್ತು ಪತಿಧರ್ಮ ವಿವೇಕ ಅಥವಾ ಗುಟ್ಟು
ಕುಮಾರೇಶ್ವರ ವಚನ
ಕುಮಾರೇಶ್ವರ ರಗಳೆ
ದೀಕ್ಷಾವಿಧಿ
ನಡೆ–ನುಡಿ ಪದಮಾಲೆ
ವೀರಶೈವ ಸಂಸ್ಕೃತಿ
ಚಿದ್ಗುರು ಪ್ರಶಂಸೆ
ಅರುವಿನ ಬೋಧೆ
ಅನುಭವ ಲಹರಿ

**ಸಂಪಾದಿತ**

ಶೀಲವಂತಯ್ಯಗಳ ತ್ರಿವಿಧಿ ಮತ್ತು
ತ್ರಿಭುವನ ತಾತನ ಗುರು ರಗಳೆ

# ಜಗದ್ಗುರು ನಿಡುಮಾಮಿಡಿ ಪ್ರಬೋಧ ಪುಸ್ತಕಮಾಲೆಯ ದೊರೆಯುವ ಗ್ರಂಥಗಳು

ಗುರುವಿನ ಗೆಲುವು (ಶ್ರೀ ನಿಡುಮಾಮಿಡಿ ಸನ್ನಿಧಿಯವ
ಸಮ್ಯಕ್‌ಜ್ಞಾನಿ ಚೆನ್ನಬಸವಣ್ಣ (ಚೆನ್ನಬಸವಣ್ಣನವರ ವಚನ ವಿಶೇಷಗಳು) ,,
ಅಣ್ಣನ ಬದುಕು ,,
ಕಾರಣಿಕ ಕುಮಾರಯೋಗಿ ,,
ಸೀಳ್ನುಡಿ ,,
ಇಮ್ಮಡಿ ಕರಿಬಸವೇಂದ್ರರ ಒಸಗೆ ,,
ಮುಪ್ಪಿನಾರ್ಯರ ಭಾವಪಾತ್ರಗಳು ,,
ಹೆಮ್ಮೆಗಳು ,,
ವಚನಾಂಜಲಿ ,,
ಆಯ್ದಕ್ಕಿ ಮಾರಯ್ಯ (ನಾಟಕ) ,,
ಮಹಾದೇವಿಯಕ್ಕನ ಯೋಗಾಂಗ ತ್ರಿವಿಧಿ ,,
ಅಕ್ಕನ ಲಾವಣಿ ,,
ಜೀವಜ್ಯೋತಿ (ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
ಶಿವನ ಸೋಲು (ನಾಟಕ) ,,
ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರೀ (ಜೀವನ-ಕೃತಿ ವಿಮರ್ಶೆ) ,,
ಸಂಸ್ಕೃತ ಸ್ತವನಮಂಜರೀ ,,
ರೇಣುಕ ವಿಜಯ (ಅಪೂರ್ಣ) ,,
ಪಕ್ಷ್ಮಲಾಕ್ಷಿ (ಕಾವ್ಯ) ,,
ಶಿವದೇವ ವಿಜಯ (ಶರೀಫ ಕವಿ ಕೃತ) ,,
ಇಷ್ಟಲಿಂಗ-ವಿಜ್ಞಾನ ,,
ವೀರಶೈವ ಪೂರ್ವಪ್ರಯೋಗರತ್ನಂ (ಸಸ್ವರ-ಸಟೀಕ-ಸಚಿತ್ರ) ,,
ಹೇಮರೆಡ್ಡಿ ಮಲ್ಲಮ್ಮ-ರಾಜಯೋಗಿ ವೇಮಣ್ಣ ,,

## ಅಚ್ಚಿನಲ್ಲಿ

ಪಂಡಿತಾರಾಧ್ಯ ಚರಿತ್ರಮು (ತೆಲುಗು) (ಪಾಲ್ಕುರಿಕೆ ... ಕವಿ ಪ್ರಣೀತ)
ವಿರೂಪಾಕ್ಷ ಮಾಹಾತ್ಮ್ಯಮು ( ,, ) (ಇಡಗೂರು ರುದ್ರಕವಿ ಕೃತ)